# ಸಿದ್ಧಗಂಗಾ

ಸಂಪುಟ 27 ಸಂಚಿಕೆ 8 ಆಗಸ್ಟ್ - 1991

ಶ್ರೀ ಮಠದ ಆಶ್ರಯದಲ್ಲಿ ವ್ಯಾಸಂಗ ಮಾಡುತ್ತಿರುವ ನಾಲ್ಕು ಸಾವಿರ ಮಕ್ಕಳು ಪ್ರಸಾದ ಸ್ವೀಕರಿಸಿ(ಊಟಮಾಡಿ) ಜ್ಞಾನಾರ್ಜನೆಯಲ್ಲಿ ತೊಡಗಿರುವುದನ್ನು ಕಂಡಾಗ ಎಲ್ಲಿಲ್ಲದ ಆನಂದವಾಗುತ್ತದೆ.

— ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು.

ಪ್ರಕಾಶಕರು:
ಹಳೆಯ ವಿದ್ಯಾರ್ಥಿಗಳ ಸಂಘ.
ಸಿದ್ಧಗಂಗಾ ಕ್ಷೇತ್ರ.

# ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಮಠ : : ತುಮಕೂರು ಜಿಲ್ಲೆ-572104

## ಸರ್ವ ಸದಸ್ಯರ ವಿಶೇಷ ಮಹಾಧಿವೇಶನ

ದಿನಾಂಕ : 1-9-1991 ಭಾನುವಾರ 10-00 ಘಂಟೆಗೆ

ಅಧ್ಯಕ್ಷತೆ : **ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವ**

ಮುಖ್ಯ ಅತಿಥಿಗಳು : **ಪದ್ಮಭೂಷಣ ಡಾ॥ ಎಂ. ಸಿ. ಮೋದಿ.**

**ಸನ್ಮಾನ್ಯ ಶ್ರೀ ಬಿ. ಎಸ್. ಮುದ್ದಪ್ಪ** IAS (ನಿವೃತ್ತ)

**ಸನ್ಮಾನ್ಯ ಶ್ರೀ ಎಸ್. ಎಸ್. ಹಸಬಿ** IPS (ನಿವೃತ್ತ)

ತಾವು ದಯಮಾಡಿ ಈ ಸಭೆಗೆ ಆಗಮಿಸಿ ಮುಂದೆ ನಡೆಯಲಿರುವ **ಶ್ರೀ ಶ್ರೀ** ಗಳವರ **"ವಜ್ರಮಹೋತ್ಸವ"** ಕಾರ್ಯಯೋಜನೆಗಳಿಗೆ ತಮ್ಮ ಅಮೂಲ್ಯ ಸಲಹೆಗಳನ್ನಿ ಸಹಕರಿಸಬೇಕಾಗಿ ಪ್ರಾರ್ಥನೆ.

### ಶ್ರೀ ಶ್ರೀಗಳವರ ವಜ್ರಮಹೋತ್ಸವದ ನೆನಪಿನ ಯೋಜನೆಗಳು:-

---

1 ಶ್ರೀ ಮಠದಲ್ಲಿ 150 ಕೊಠಡಿಗಳುಳ್ಳ ಬೃಹತ್ ವಿದ್ಯಾರ್ಥಿ ನಿಲಯ-ಅಂದಾಜು. ರೂ 1.5 ಕೋಟಿ

2 ಏಕಕಾಲದಲ್ಲಿ 2000 ವಿದ್ಯಾರ್ಥಿಗಳು ಪ್ರಸಾದ ಸ್ವೀಕರಿಸುವ ಸುಸಜ್ಜಿತ ಪ್ರಸಾದ ನಿಲಯ ಅಂದಾಜು ವೆಚ್ಚ ರೂ -1.12 ಕೋಟಿ.

3 ನೀರು ಸರಬರಾಜು ಮತ್ತು ನೈರ್ಮಲ್ಯ ವ್ಯವಸ್ಥೆ. ಅಂದಾಜು ವೆಚ್ಚ 54 ಲಕ್ಷ ರೂ.

4 ಶ್ರೀ ಶ್ರೀಗಳವರ ಜನ್ಮಸ್ಥಳವಾದ ವೀರಾಪುರದಲ್ಲಿ ವೃತ್ತಿ ಶಿಕ್ಷಣ ಕೇಂದ್ರ ಸ್ಥಾಪನೆ. ಅಂದಾಜು ವೆಚ್ಚ 15 ಲಕ್ಷ ರೂಗಳು.

ಇನ್ನೂ ಮುಂತಾದ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ.

ಈ ಎಲ್ಲಾ ಯೋಜನೆಗಳು ಶೀಘ್ರವಾಗಿ ಕಾರ್ಯಗತವಾಗಿ ಪೂರ್ಣ ಗೊಳ್ಳಲು ಸರ್ವರ ಸಹಾಯ, ಸಹಕಾರವನ್ನು ಕೋರುತ್ತೇವೆ.

ಪ್ರೊ॥ ಎಂ. ಎನ್. ಚನ್ನಬಸಪ್ಪ,
ಪ್ರಧಾನ ಕಾರ್ಯದರ್ಶಿ.

# ಸಿದ್ಧಗಂಗಾ

ಸಂಪುಟ–27. ಸಂಚಿಕೆ–8. ಆಗಸ್ಟ್ –1991.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ.

ವಚನ ಮಂತ್ರವ ಪಠಿಸಿ ವಚನ ಪ್ರಣವತೆ ಮಣಿದು
ವಚನಲಿಂಗವಾಗಿ ಆರಳಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಹುಟ್ಟು ಸಾವಿನ ಗುಟ್ಟರಟ್ಟು ಮಾಡುತ ನಡೆದು
ಕಟ್ಟಿದೆ ಕನ್ನ್ಮಟವ ಶರಣರ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಕುದಿವೆದೆಯ ಜೀವಗಳ ಹದಗೊಳಿಸಿಸಾಗಿರುವೆ
ನಿಜದನುಭಾವವ ತೋರಿರುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

—ಹೆಚ್. ವಿ. ವೀರಭದ್ರಯ್ಯ.

# ಶ್ರೀ ವಾಣಿ



ನಾಯಿ ಸಮಾಧಿ:-

ಧಾರವಾಡ ಜಿಲ್ಲೆಯ ನವಿಲುಗುಂದದಲ್ಲಿ ಚನ್ನಬಸಪ್ಪನೆಂಬ ಶರಣರಿದ್ದರು. ಶ್ರೀಮಂತರಾಗಿದ್ದರು, ಧರ್ಮಿಷ್ಠರು ಕಾಯಕ ದಾಸೋಹಗಳಲ್ಲಿ ಶ್ರದ್ಧೆ ಬೆಳೆಸಿಕೊಂಡಿದ್ದರು. ಅವರು ಮಾಡುತ್ತಿದ್ದ ಕಾಯಕ ವ್ಯಾಪಾರ. ಅವರ ಬಳಿ ಸುಬ್ಬರಾಯರು ಎಂಬ ಗುಮಾಸ್ತರಿದ್ದರು. ತುಂಬಾ ಪ್ರಾಮಾಣಿಕ ವ್ಯಕ್ತಿ, ಮಕ್ಕಳೊಂದಿಗರು. ಕೆಲಸದಲ್ಲಿ ಅಚ್ಚುಕಟ್ಟು ಕಾಲಕ್ಕೆ ಸರಿಯಾಗಿ ಕೆಲಸದ ಮೇಲೆ ಹಾಜರಾಗುತ್ತಿದ್ದರು. ನಿಮಿಷ ನಿಮಿಷಾರ್ಧವನ್ನೂ ವ್ಯರ್ಥವಾಗಿ ಕಳೆಯದಂತೆ ಕೆಲಸದಲ್ಲಿ ತಲ್ಲೀನರಾಗಿರುತ್ತಿದ್ದರು. ಚನ್ನಬಸಪ್ಪನವರಿಗೆ ಸುಬ್ಬರಾಯರ ಮೇಲೆ ಪ್ರೀತಿ, ನಂಬಿಕೆಗಳು ಸಹಜವಾಗಿಯೇ ಬೆಳೆದು ಬಂದವು, ಇಬ್ಬರೂ ಮಿತಭಾಷಿಗಳು ವ್ಯವಹಾರದಲ್ಲಿ ಇಬ್ಬರದೂ ಶುದ್ಧ ಹಸ್ತ, ನೋಡಿದವರಿಗೆಲ್ಲ ಸಂತೋಷವಾಗುವಂತೆ ಇಬ್ಬರೂ ನಡೆದುಕೊಳ್ಳುತ್ತಿದ್ದರು ಕೆಲಸಕ್ಕಿಟ್ಟುಕೊಂಡವನು ನಾನು ಎಂಬ ಭಾವನೆ ಚನ್ನಬಸಪ್ಪನವರಿಗಿರಲಿಲ್ಲ, ಇವರ ಆಶ್ರಯದಲ್ಲಿ ಕೆಲಸಕ್ಕೆ ನಾನಿದ್ದೇನೆ ಎಂಬ ಭಾವನೆ ಸುಬ್ಬರಾಯರಿಗಿರಲಿಲ್ಲ. ಇಬ್ಬರ ಹೃದಯಗಳೂ ಬೆಸೆದುಕೊಂಡಿದ್ದವು. ಒಮ್ಮೆ ಸುಬ್ಬರಾಯರಿಗೆ ಹಣದ ಮುಗ್ಗಟ್ಟು ಎದುರಾಯಿತು. ಮಗಳ ಮದುವೆ ನಿಶ್ಚಿತವಾಯಿತು. ಯಾವುದೋ ಬರಬೇಕಾಗಿದ್ದ ಹಣ ಕೈಗೆ ಸಮಯಕ್ಕೆ ಬರಲಿಲ್ಲ. ಅನಿವಾರ್ಯವಾಗಿ ಚನ್ನಬಸಪ್ಪನವರ ಬಳಿ ಬಾಯಿ ಬಿಡಬೇಕಾಯಿತು. ಚನ್ನಬಸಪ್ಪನವರಿಗಾದರೋ ಎಲ್ಲಿಲ್ಲದ ಸಂತೋಷ. ನಿಷ್ಠಾವಂತ ಸುಬ್ಬರಾಯರಿಗೆ ಇಷ್ಟಾದರೂ ಸಹಾಯಮಾಡುವ ಅವಕಾಶ ಒದಗಿತಲ್ಲಾ ಎಂಬ

ಭಾವನೆ. ಸುಬ್ಬರಾಯರು ಕೇಳಿದಷ್ಟು ಹಣಕೊಟ್ಟು ಹಣ ಹಿಂತಿರುಗಿಸುವ ಯೋಜ
ಬೇಡವೆಂದು ತಿಳಿಸಿದರು. ಆದರೆ ಸುಬ್ಬರಾಯರು ಆದಷ್ಟು ಬೇಗ ಸಾಲ ತೀರಿಸುವ
ದಾಗಿ ತಿಳಿಸಿ ಹಣ ಪಡೆದುಕೊಂಡು ಮಗಳ ಮದುವೆ ಸಾಂಗವಾಗಿ ನಡೆಸಿದರು. ಅನಂ
ಸುಬ್ಬರಾಯರಿಗೆ ಒಂದರಮೇಲೊಂದು ತೊಂದರೆಗಳು ಬರುತ್ತಲೇ ಇದ್ದವು. ಚನ್ನಬ
ಪ್ಪನವರ ಬಳಿ ಆಗಾಗ ಆಬಗ್ಗೆ ನೆನಪಿಸುತ್ತಲೇ ಬಂದರು. ಚನ್ನಬಸಪ್ಪನವರು
ಹಣವನ್ನು ಹಿಂದಕ್ಕೆ ಪಡೆಯ ಬೇಕೆಂದು ಕೊಟ್ಟಿರಲಿಲ್ಲ. ಸುಬ್ಬರಾಯರು ಅದನ್ನು
ದಾನವೆಂದು ಸ್ವೀಕರಿಸಿರಲಿಲ್ಲ. ಹೀಗಿರುವಾಗ ಸುಬ್ಬರಾಯರು ಖಾಯಿಲೆ ಮಲಗಿದರು
ಹಣಕೊಡಲಾಗಲಿಲ್ಲವಲ್ಲ ಎಂದೇ ಕೊರಗಿದರು. ಕೊನೆಗೊಂದು ದಿನ ಕಣ್ಮುಚ್ಚಿದರು.
ಚನ್ನಬಸಪ್ಪನವರು ಆತ್ಮೀಯ ಸುಬ್ಬರಾಯರನ್ನು ಕಳೆದುಕೊಂಡು ತಂಬಾ ದುಃಖಿಸಿದರು
ಕಾಲಕಳೆಯುತ್ತ ಬಂದಿತು ಒಂದು ದಿನ ರಾತ್ರಿ ಚನ್ನಬಸಪ್ಪನವರ ಮನೆಗೆ ಕಳ್ಳರು
ನುಗ್ಗಿ ಚಿನ್ನ ಬೆಳ್ಳಿ ಆಭರಣಗಳನ್ನು ಕಳವು ಮಾಡಿಕೊಂಡು ಹೋದರು. ಚನ್ನಬಸ
ಪ್ಪನವರು ಅವರ ಬಗ್ಗೆ ಹೆಚ್ಚೇನೂ ಚಿಂತಿಸಲಿಲ್ಲ. ಹೀಗಿರುವಾಗ ಒಂದು ನಾಯಿಮರಿ
ಎಲ್ಲಿಂದಲೋ ಬಂದದ್ದು ಚನ್ನಬಸಪ್ಪನವರ ಪಂಚೆಯನ್ನು ಬಾಯಲ್ಲಿ ಕಚ್ಚಿ ಎಳೆಯ
ಹತ್ತಿತು. ಅವರಿಗೆ ಇದೇನೆಂದು ಗೊತ್ತಾಗದೇ ಹೋಯಿತು. ಕೊನೆಗೆ ನಾಯಿಮರಿ
ಎಳೆದ ಕಡೆಗೆ ನಡೆದರು. ಅದು ಊರಹೊರಗೆ ದೂರದ ಹೊಲದ ಪಕ್ಕದಲ್ಲಿದ್ದ
ಪೊದೆಯ ಬಳಿಗೆ ಕರೆದುಕೊಂಡು ಹೋಗಿ ಅಲ್ಲಿ ನೆಲವನ್ನು ಕಾಲಿನಿಂದಕೆರೆದು
ತೋರಿಸಿತು. ಚನ್ನಬಸಪ್ಪನವರು ಅದು ಕೆರೆದು ತೋರಿಸಿದ ಕಡೆಯಲ್ಲಿ ಮತ್ತಿಷ್ಟು
ಅಗೆದು ನೋಡಿದಾಗ ತಮ್ಮ ಮನೆಯಲ್ಲಿ ಕಳುವಾಗಿದ್ದ ಅಭರಣಗಳು ಕಾಣಿಸಿದವು
ಅವರಿಗೆ ತುಂಬ ಸಂತೋಷವಾಯಿತು, ಕಣ್ಣಲ್ಲಿ ನೀರು ಬಂತು. ಆ ಆಭರಣಗಳನ್ನು
ಕೈಗೆತ್ತಿಕೊಂಡರು ; ತಕ್ಷಣವೇ ತಮ್ಮನ್ನು ಅಲ್ಲಗೆ ಕರೆದು ತಂದಿದ್ದ ನಾಯಿಮರಿ
ಅವರ ಕಾಲಬಳಿ ಬಿದ್ದು ಪ್ರಾಣ ಬಿಟ್ಟಿತು. ಚನ್ನಬಸಪ್ಪನವರ ಕಣ್ಣಲ್ಲಿ ಮತ್ತೆ ಕಣ್ಣೀರು
ಬಂತು. **ಸುಬ್ಬರಾಯರೇ ಎಂಥ! ಮನುಷ್ಯರಪ್ಪ** ಈ ರೂಪದಲ್ಲಿ ಬಂದು ಹಣ ಕೊ
ಬೇಕಿತ್ತೆ ? ನೀವು! ಎಂದು ನಾಯಿಮರಿಗೆ ಅಲ್ಲಿಯೇ ಸಮಾಧಿ ಮಾಡಿಸಿದರು. ಗಣಾ
ರಾಧನೆ ಏರ್ಪಡಿಸಿದರು.

# ಶ್ರೀ ಸಿದ್ಧಲಿಂಗೇಶ್ವರ ವಚನ



ಮರ್ಕಟನ ತಲೆಯಲ್ಲಿ ಮಾಣಿಕವಿಪ್ಪುದ ಕಂಡೆನಯ್ಯ
ಮರ್ಕಟ ಹಿಡಿದು ಮಾಣಿಕವ ತೆಕ್ಕೊಳ್ಳಲಾರಿಗಳವಲ್ಲ ನೋಡಾ
ಆ ಮರ್ಕಟನ ಕೊಂದು ಮಾಣಿಕವ ತೆಕ್ಕೊಳ್ಳಬಲ್ಲದೆ
ಮುಕ್ಕಣ್ಣ ಶಿವನೆಂದು ಬೇರುಂಟೆ ಹೇಳಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

ಚಂಚಲ ಸ್ವರೂಪನಾದ ಮನವೆಂಬ ಮರ್ಕಟನತಲೆಯಲ್ಲಿ ಅನರ್ಘ್ಯ ರತ್ನ ಸ್ವರೂಪವಾದ ಪರ ಶಿವಲಿಂಗವಿದೆ. ಅರಿವಿನ ಕಣ್ಣಿಗೆ ಅದನ್ನು ಕಾಣುವುದು ಸಾಧ್ಯ. ಅಂತಹ ಮನಸ್ಸನ್ನು ಪರಶಿವಲಿಂಗದಲ್ಲಿ ಕೇಂದ್ರೀಕರಿಸುವುದು ಜ್ಞಾನಿಗಳಿಗೆ ಮಾತ್ರಸಾಧ್ಯ. ಅಂತಹವರು ವಿರಳ. ಮನಸ್ಸನ್ನು ಮಂತ್ರಲಿಂಗ ಸಂಬಂಧದಿಂದ ಚಂಚಲ ಸ್ವಭಾವದಿಂದ ದೂರಗೊಳಿಸಿ ಪರಶಿವಲಿಂಗವನ್ನು ಬಹಿರಂಗದಲ್ಲಿ ಇಷ್ಟಲಿಂಗವಾಗಿ, ಅಂತರಂಗದಲ್ಲಿ ಪ್ರಾಣಲಿಂಗವಾಗಿ ಅಳವಡಿಸಿಕೊಂಡು ಷಟ್‌ಸ್ಥಲಾಚರಣೆಯಿಂದ ಜ್ಞಾನಕ್ರಿಯಾ ಸಮರಸಸಾಧಿಸಿದ ಶರಣರು ಶಿವಸ್ವರೂಪಿಗಳೇ ಅಲ್ಲದೆ ಬೇರೆ ಪರಶಿವಲಿಂಗವೆಂಬುದುಂಟೆ? ಎನ್ನುತ್ತದೆ ವಚನ.

**ಸಿದ್ಧಗಂಗಾ ಮಾಸ ಪತ್ರಿಕೆ**
**ಶ್ರೀ ಸಿದ್ಧಗಂಗಾ ಮಠ-572104**
ತುಮಕೂರು ಜಿಲ್ಲೆ

ಪ್ರಧಾನ ಸಂಪಾದಕರು
**ಪಾ॥ ಚನ್ನಪ್ಪ ಎರೇಸೀಮೆ**

* * *

ಸಂಪಾದಕರು
**ಹೆಚ್. ವಿ. ವೀರಭದ್ರಯ್ಯ**

* * *

ಸಹ ಸಂಪಾದಕರು
**ಬಿ. ವೀರಭದ್ರಯ್ಯ**
**ಪಿ. ಎಸ್. ಚಂದ್ರಶೇಖರಯ್ಯ**

* * *

ಜಾಹೀರಾತು ವಿಭಾಗ
**ಎಂ. ರೇಣುಕಾರಾಧ್ಯ**

* * *

ವಿತರಣೆ ವಿಭಾಗ
**ಆರ್. ಎಸ್. ಮಲ್ಲೇಶಪ್ಪ**

* * *

ಪ್ರಕಾಶಕರು
**ಹೆಚ್. ಬಿ. ಗಂಗಾಧರಯ್ಯ**
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**

* * *

ಪ್ರಕಟಣೆಯ ಸ್ಥಳ
**ಶ್ರೀ ಸಿದ್ಧಗಂಗಾಕ್ಷೇತ್ರ**

**ಚಂದಾ ವಿವರ**
ವಾರ್ಷಿಕ ಚಂದಾ 25-00ರೂ
ಆಜೀವ ಸದಸ್ಯತ್ವ 250-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗ[illegible] ಮಠದಿಂದ ಪ್ರಕಟವಾಗುತ್ತಿರುವ ಮ[illegible] ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾ[illegible] ಸಂಘದ ಹೆಮ್ಮೆಯ ಸೇವಾ ಪುರಸ[illegible] ಮೇಲಾಗಿ ಶ್ರೀ ಮಠದ ಮುಖವಾ[illegible] ಪೂಜ್ಯ ಶ್ರೀ ಶ್ರೀ ಡಾ॥ ಶಿವಕುಮ[illegible] ಮಹಾಸ್ವಾಮಿಗಳವರ ದಿವ್ಯ ಮಾರ್ಗದ[illegible] ನದಲ್ಲಿ ಮುನ್ನಡೆದಿರುವ ಪತ್ರಿಕೆ. ಶ್ರೀ[illegible] ದಾಸೋಹ ಸೇವಾ ತತ್ಪರತೆಯಿಂದ ಹೆ[illegible] ಹಾಕುತ್ತಿದೆ. ಈ ಧ್ಯೇಯ ಸಾಧನೆಗ[illegible] ನಾಡಿನ ಗಣ್ಯ ಲೇಖಕರಿಂದ ಸಾಹಿ[illegible] ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ[illegible] ಇತಿಹಾಸ, ವೈಚಾರಿಕ, ಚಿಂತನ ಮುಂತಾ[illegible] ಲೇಖನಗಳನ್ನು ಸ್ವಾಗತಿಸುತ್ತದೆ ಅಸ್ವೀಕೃ[illegible] ಲೇಖನಗಳನ್ನು ಪಡೆಯಲು ಸಾಕಷ[illegible] ಅಂಚೆಸ್ಟಾಂಪುಗಳನ್ನು ಲಗತ್ತಿಸಿರಬೇಕು[illegible] ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾ[illegible] ಕೊಳ್ಳುವ ಅಧಿಕಾರ ಸಂಪಾದಕರಿಗಿದೆ[illegible] ಅನುವಾದ, ರೂಪಾಂತರ ಲೇಖನಗಳಿ[illegible] ಮೂಲ ಕೃತಿಕಾರರ ಅನುಮತಿ ಪಡೆದಿ[illegible] ಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

**"ಸಂಪಾದಕರು"**
'ಸಿದ್ಧಗಂಗಾ' ಕನ್ನಡ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.

ಇವರಿಗೆ ಕಳುಹಿಸಿಕೊಡಬೇಕಾಗಿ ಪ್ರಾರ್ಥನೆ

# ಸಂಪಾದಕೀಯ

ಶ್ರೀ ಮಠಕ್ಕೆ ಸೇರಿದ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಈ ವರ್ಷ ಹೆಚ್ಚಳ.
ಳ್ಳಾರಿ, ಬಿಜಾಪುರ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಿಂದ ಬಂದ ಮಕ್ಕಳೇ ಹೆಚ್ಚು
ಟ್ಟ ಪುಟ್ಟ ಮಕ್ಕಳು ತಂದೆ-ತಾಯಿಗಳನ್ನು ಬಿಟ್ಟು ದೂರದಿಂದ ಬಂದಾಗ ಅವ
ನ್ನು ಹಿಂದಕ್ಕೆ ಕಳುಹಿಸುವುದಾದರು ಹೇಗೆ ಎಂಬ ಕಳಕಳಿ ಪರಮ ಪೂಜ್ಯ ಶ್ರೀಗಳಿಗೆ
ಂದಯಾರೂ ಪ್ರವೇಶ ಸಿಗಲಿಲ್ಲ ಎಂದು ಹಿಂತಿರುಗಿದ ನಿದರ್ಶನಗಳಿಲ್ಲ. ಹತ್ತಾರು
ಕ್ಷಣ ಸಂಸ್ಥೆಗಳು ಮಠದಲ್ಲಿವೆ. ಅವುಗಳ ಜೊತೆಗೆ ತುಮಕೂರಿನ ಶಾಲಾ ಕಾಲೇ
ಜುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಬೇರೆ ಆಶ್ರಯ ಪಡೆದಿದ್ದಾರೆ.
ರೀ ಮಠಕ್ಕೆ ಬಂದ ಹೋಗುವ ಯಾತ್ರಾರ್ಥಿಗಳು ಹೆಚ್ಚಾಗುತ್ತಿದ್ದಾರೆ ದಿನೇ ದಿನೇ
ಭಕ್ತಾದಿಗಳು, ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು ಪರಮ ಪೂಜ್ಯರಲ್ಲಿ
ವಿನಯಪೂರ್ವಕವಾಗಿ ವಿನಂತಿಸಿಕೊಳ್ಳುತ್ತಿದ್ದಾರೆ-ಸಂಸ್ಥೆಯನ್ನು ಮಿತಿಗೊಳಿಸಿಕೊಳ್ಳು
ವುದು ಸೂಕ್ತವೆಂದು—ಎಲ್ಲರಿಗೂ ಎಲ್ಲಕ್ಕೂ ಪೂಜ್ಯ ಶ್ರೀಗಳವರು ಹೇಳುತ್ತಿರುವ
ಉತ್ತರ ಒಂದೇ "ಆಗಲಿ ನೋಡೋಣ; ವಿಚಾರ ಮಾಡುತ್ತೇನೆ" - ಎಂದು.
"ಇದೇಕೆ ಬುದ್ಧಿ ಹೀಗೆ?" ಎಂದು ಯಾರಾದರು ಕೇಳಿದರೆ ಒಂದು ಎಸ್‌ಎಸ್‌ಎಲ್‌ಸಿ
ಯನ್ನು ಅಥವಾ ಒಂದು ಡಿಗ್ರಿಯನ್ನು ಪಡೆದುಕೊಂಡರೆ ಅವನ ಬದುಕಿಗೆ ಒಂದು
ದಾರಿಯಾಗುತ್ತದಲ್ಲವೆ ? ಸಂಸ್ಥೆಗೆ ಜವಾಬ್ದಾರಿಯೇನೋ ಹೆಚ್ಚಾಗುತ್ತದೆ. ನಿಜ.
ಆದರೆ ಒಬ್ಬನ ಜೀವನಕ್ಕೆ ಒಂದು ಸಣ್ಣ ದೀಪ ಹಚ್ಚಲು ಸಹಾಯವಾಗುವುದಾ
ದರೆ ಸಂಸ್ಥೆಯ ಕಷ್ಟವೇನೂ ದೊಡ್ಡದಲ್ಲ ಬಿಡಿ "- ಎನ್ನುತ್ತಾರೆ. ಸೇವೆಯೇ
ಶಿವಯೋಗ ಎಂದು ನಂಬಿ ನಡೆದಿರುವ ಶಿವಯೋಗಿ ಪರಮಪೂಜ್ಯ ಶ್ರೀ ಶ್ರೀ ಡಾ॥
ಶಿವಕುಮಾರ ಮಹಾಸ್ವಾಮಿಗಳು ಅರವತ್ತು ವರ್ಷಗಳಿಂದ ಈ ಸೇವೆ ಮಾಡುತ್ತ
ಬಂದಿದ್ದಾರೆ. ಅವರಿಗೀಗ ವಜ್ರಮಹೋತ್ಸವ ಆಚರಿಸಲು ಭಕ್ತಾದಿಗಳು ನಡೆಸಿ
ದ್ದಾರೆ. ಈ ಸಂದರ್ಭದಲ್ಲಿ ತಮ್ಮ ಉದಾರ ಕಾಣಿಕೆ ಸಲ್ಲಿಸಲು ಅವಕಾಶ ಬಾಗಿಲು
ತೆರೆದಿದೆ. ಹಳೆಯ ವಿದ್ಯಾರ್ಥಿಗಳು ಮುಕ್ತ ಮನಸ್ಸಿನಿಂದ ಭಕ್ತಿ ಕಾಣಿಕೆ ಅರ್ಪಿ
ಸುತ್ತಾರೆಂದು 'ಸಿದ್ಧಗಂಗಾ' ಆಶಿಸುತ್ತದೆ. ಭಕ್ತಾದಿಗಳು, ಅಭಿಮಾನಿಗಳು ಈ
ಪುಣ್ಯಾವಸರದಲ್ಲಿ ಕೊಡುಗೈದಾನಿಗಳಾಗಿ ಮುಂದೆ ಬರಬೇಕೆಂದು ಪ್ರಾರ್ಥಿಸುತ್ತದೆ.

## ದಾನಿಗಳಿಗೊಂದು ಸದವಕಾಶ

### ಶ್ರೀ ಮಠದ ಸಮಸ್ತ ಭಕ್ತಾದಿಗಳಿಗಾಗಿ

* ಪ್ರತಿ ತಿಂಗಳು ಯಥಾ ಶಕ್ತಿ ನಿಮ್ಮ ಕಾಣಿಕೆ ಕಳಿಸಿರಿ.
* ಮನಿಯಾರ್ಡರು ದ್ವಾರಾ ಕಳುಹಿಸಬಹುದು.
* ಮೊದಲ ಬಾರಿ ಶ್ರೀಗಳವರಿಂದ ಪತ್ರ ಬರುತ್ತದೆ.
* ಪ್ರತಿ ತಿಂಗಳು ಶ್ರೀಗಳವರೇ ಹಣಪಡೆದು ಸಹಿಮಾಡಿದ ಕೂಪನ್ ಬರುತ್ತದೆ.
* ಯಥಾಶಕ್ತಿ ಕಾಣಿಕೆ ಕಳುಹಿಸುವುದು ಯಾರಿಗೂ ಹೊರೆಯಾಗಲಾರದು.
* ಪ್ರತಿಯೊಬ್ಬರ ಒಂದೊಂದು ಕಾಣಿಕೆಯೂ ಹಲವು ಸಹಸ್ರಗಳೇ ಆಗಿ ಶ್ರೀಗಳವರ ಪುಣ್ಯಕಾರ್ಯಕ್ಕೆ ಸಹಕಾರಿಯಾದೀತು.

### ಪ್ರತಿ ಶತ ಒಂದು ರೂ. ಯೋಜನೆ

(ಶ್ರೀ ಮಠದ ಎಲ್ಲಾ ಹಳೆಯ ವಿದ್ಯಾರ್ಥಿಗಳು ಮತ್ತು ಆ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುತ್ತಿರುವವರಿಗೆ)

* ನಿಮಗೆ ಪ್ರತಿ ಮಾಹೆ ನಿರ್ದಿಷ್ಟ ಆದಾಯ ಉಂಟು.
* ಅದರಲ್ಲಿ ಪ್ರತಿಶತ ಒಂದು ರೂ. (*one percent*) ಶ್ರೀ ಮಠಕ್ಕೆ ಕಳುಹಿಸಬಹುದು.
* ಒಬ್ಬೊಬ್ಬರೇ ಕಳುಹಿಸಬಹುದು ಅಥವಾ ಹಲವರು ಒಟ್ಟಾಗಿ ಕಳುಹಿಸಬಹುದು.
* ಚೆಕ್, ಡ್ರಾಫ್ಟ್ ಅಥವಾ ಎಂ.ಓ ಕಳುಹಿಸಬಹುದು
* ಶ್ರೀ ಶ್ರೀಗಳವರ ಹೆಸರಿಗೇ ಕಳುಹಿಸಬೇಕು.
* ಈ ನಿಧಿ ಸತ್ಪಾತ್ರಕ್ಕೆ ಸಲ್ಲುತ್ತದೆ.

ಜೀವನದಲ್ಲಿ ದಾನ ಮಾಡುವವರು ಇಷ್ಟು ಉತ್ಕೃಷ್ಟ ದಾನವನ್ನು ಮಾಡಲು ಹಿಂಜರಿಯಬಾರದು. ಇದಕ್ಕೂ ಶ್ರೇಷ್ಠ ಪಾತ್ರತ್ವ ನಿಮ್ಮ ದಾನಕ್ಕೆ ಅನ್ಯತ್ರ ದೊರೆಯದು. ಇದು ಸುಸಮಯ, ಅಪರೂಪದ ಅವಕಾಶ. ಈ ತಿಂಗಳಿನಿಂದಲೇ ಕಾರ್ಯರೂಪಕ್ಕೆ ತನ್ನಿ. ಇಂದೇ ಕಳಿಸಿರಿ. ಜ್ಞಾನ ದೀವಿಗೆಯಾಗಿ ಶ್ರೀ ಸಿದ್ಧಗಂಗಾ ಮಠ ನಾಡಿಗೆ ಬೆಳಕನ್ನು ಚೆಲ್ಲುತ್ತಿದೆ.

* ಪುಣ್ಯ ಕಾರ್ಯಕ್ಕಾಗಿ ಉದಾರ ನೆರವು ನೀಡಿರಿ.

ಇತಿ,

ಭಕ್ತ ಮಂಡಳಿ.

# ಜನಸೇವೆಯೇ ಪರಮಾದರ್ಶ

ಎಸ್. ಕಸ್ತೂರಿ ರಂಗನ್, (ನೀಲತ್ತಹಳ್ಳಿ ಕಸ್ತೂರಿ) ನಂ.29. 3ನೇ ದೇವಸ್ಥಾನದರಸ್ತೆ,
ಮಲ್ಲೇಶ್ವರ, ಬೆಂಗಳೂರು - 560003.

"ಜನಸೇವೆಯೆ" ಜನಾರ್ಧನ ಸೇವೆ"
"ದೇಶಸೇವೆಯೆ ಈಶಸೇವೆ"

ಇಂಥ ವಾಕ್ಯಗಳನ್ನ ಎಷ್ಟೋಸಲ ಕೇಳುತ್ತೇವೆ. ಮಾತೃದೇವೋಭವ ಪಿತೃದೇವೋಭವ, ಅತಿಥಿ ದೇವೋ ಭವ, ಆಚಾರ್ಯದೇವೋ ಭವ ಎಂದಿತು ವೇದ ಸಾವಿರಾರುವರ್ಷಗಳ ಹಿಂದೆ ಕಾಯಕವೇ ಕೈಲಾಸ ಎಂದರು ಬಸವಣ್ಣನವರು. ಸ್ವಾಮಿ ವಿವೇಕಾನಂದರು 'ದರಿದ್ರನಾರಾಯಣ' ಎಂಬ ಮಾತನ್ನು ಆಡಿದರು. 'ದರಿದ್ರದೇವೋ ಭವ' ಎಂಬ ಮಾತೂ ಈ ಯುಗದಲ್ಲಿ ಬಂತು. ಮಹಾತ್ಮ ಗಾಂಧೀಜಿ ಅಂತೂ ದೀನ ದಲಿತರ ಸಲುವಾಗಿಯೆ ಬಾಳಿದರು. ಗಾಂಧೀಯುಗದಲ್ಲಿ ಇಂಥ ನಿಷ್ಕಾಮ ಸೇವೆಯ ಪ್ರಸಂಗಗಳು ಅನೇಕ. ಹಾಗೆ ಸೇವೆಯಲ್ಲಿ ಬದುಕು ಕಳೆದ ಮಹಿಮರೂ ಅನೇಕ.

ತಾವು ಮಾಡುವ ಕೆಲಸವನ್ನೇ ದೇವರಪೂಜೆ ಎಂದು ಭಾವಿಸುವುದು ಅಪರೂಪ ಏನಲ್ಲ. ಸಮಾಜದಲ್ಲಿ ಭಗವಂತನನ್ನು ಕಂಡು, ಆ ಸಮಾಜರೂಪಿ ಭಗವಂತನನ್ನು ಸೇವೆಯ ಮೂಲಕ ಆರಾಧಿಸುವ ಉದಾಹರಣೆ ಎಷ್ಟೋ ಉಂಟು. ಮಹಾಭಾರತದಲ್ಲಿ ಬರುವ ಧರ್ಮವ್ಯಾಧನ ಕಥೆ ಇದಕ್ಕೆ ಉದಾಹರಣೆ. ಅಲ್ಲಿ ಒಬ್ಬ ಸಾಧ್ವಿ ತನ್ನ ಪತಿಸೇವೆಯನ್ನು ಪರಮಾತ್ಮನ ಸೇವೆ ಎಂದು ಕೊಂಡು ಮಾಡುತ್ತಾಳೆ. ಆದಕ್ಕಾಗಿ ಬಾಗಿಲಿಗೆ ಬಂದಿದ್ದ ಅತಿಥಿಯಾದ ಮುನಿಯನ್ನು ಸಹ ಸ್ವಲ್ಪಹೊತ್ತು ಕಾಯಿಸುತ್ತಾಳೆ. ಮುನಿಯ ಕೋಪ ಅವಳನ್ನು ಏನು ಮಾಡಲೂ ಸಾಧ್ಯವಾಗುವುದಿಲ್ಲ. ಮುನಿಯು ಆಕೆಗೆ ಮಣಿದು ಮಾರ್ಗದರ್ಶನ ಬೇಡುತ್ತಾನೆ. ಆಕೆ ಅದಕ್ಕೆ ಹೇಳುವ ಮಾತು ಮಾರ್ಮಿಕ. 'ಕಟುಕರ ಕೇರಿಯಲ್ಲಿ ಇಂಥ ಕಟುಕ ವ್ಯಾಧ ಒಬ್ಬ ಇದ್ದಾನೆ. ಅವನ ಬಳಿಹೋಗಿ ಜ್ಞಾನ ಪಡೆ ಎನ್ನುತ್ತಾಳೆ. ಮುನಿ ಅವಕ್ಕಾದರೂ, ಹಾಗೆಯೆ ಮಾಡುತ್ತಾನೆ. ಕಟುಕ ಹೇಳಿದ ಮಾತು ಸೇವಾಧರ್ಮದ ಮಾತು, "ನನ್ನಪಾಲಿಗೆ ಈ ಮಾಂಸ ವಿಕ್ರಯದ ಕಾಯಕ ಬಂದಿದೆ. ಇದನ್ನು ದೇವರ ಸೇವೆ ಎಂದೇ ಭಾವಿಸಿ ಪ್ರಾಮಾಣಿಕವಾಗಿ ಮಾಡುತ್ತೇನೆ" ಎಂದ. ಮುನಿ ಇಂಥ ಸೇವಾ ಕರ್ಮದ ದಾರಿ ಕಂಡುಕೊಂಡ ಎನ್ನುತ್ತದೆ ಆಕತೆ. ಮಾಡುವ ಕೆಲಸವನ್ನೇ ಹೀಗೆ ಪೂಜೆ ಎಂದು ಮಾಡುವ ನಿದರ್ಶನ ಉಂಟು. ಆದರೆ ದೇವರ ಸೇವೆ ಅಥವಾ ಪೂಜೆಯ ವ್ರತ ತೊಟ್ಟು ನಡೆಸುತ್ತಿರುವವಾಗ, ನಡುವೆ ದೀನ ದಲಿತರ ಸೇವೆಗೆ ಆಪೂಜಾವ್ರತವನ್ನೇ ಬಿಟ್ಟು ಬರುವುದು ತೀರ ಅಪರೂಪದವಿಷಯ. ಮಹತ್ತರವಿಷಯ.

ಇಂಥದೊಂದು ಪ್ರಸಂಗ ನಮ್ಮ ಕರ್ನಾಟಕದಲ್ಲೇ, ಈ ಕಾಲದಲ್ಲೆ ನಡೆಯಿತು ಎನ್ನುವುದು ಹೆಮ್ಮೆಯ ವಿಚಾರ.

ಕೌಜಲಗಿ ಹನುಮಂತರಾಯರು ಕರ್ನಾಟಕದ ಸ್ವಾತಂತ್ರ್ಯ ಹೋರಾಟ, ಖಾದಿ ಕೆಲಸಗಳ ಆದ್ಯರಲ್ಲಿ ಒಬ್ಬರು. ಬಿಜಾಪುರದವರು. ಅವರು ಹುಟ್ಟಿದ್ದು ಮುಧೋಳದಲ್ಲಿ ಫೆಬ್ರುವರಿ 1891ರಲ್ಲಿ. ಇತ್ತೀಚೆಗೆ ಅವರ ಜನ್ಮ ಶತಾಬ್ದಿ ಸೆರವೇರಿತು. ರಾಯರು ದೇಶ ಸೇವೆಗಾಗಿ ತಮ್ಮನ್ನು ತಾವು ಪೂರಾ ಅರ್ಪಿಸಿಕೊಂಡಿದ್ದರು. ವಕೀಲಿ ಕಲಿತಿದ್ದರು. ಅದರಲ್ಲಿ ಹೆಸರು ಹಣ ಎಲ್ಲಗಳಿಸುವ ಅವಕಾಶವಿತ್ತು. ಆದರೆ ಗಾಂಧೀಜಿ ಬೀಸಿದ ಸಂಮೋಹಕ ಗಾಳಿಗೆಸಿಕ್ಕಿ, ರಾಯರು ಎಲ್ಲವನ್ನು ತ್ಯಜಿಸಿ ದೇಶಸೇವೆಯ ಹಾದಿ ಹಿಡಿದರು. ಬಡತನದಲ್ಲಿ ಬೆಂದರು. ಹೋರಾಟಬಿಡಲಿಲ್ಲ. ಜೈಲಿಗೆಹೋದರು. ಅಲ್ಲಿದ್ದಾಗಲೇ ಅವರಿಗೆ ಮಗಹುಟ್ಟಿದ, ಹೆಂಡತಿ ಕ್ಷಯರೋಗಕ್ಕೆ ಬಲಿಯಾದರು. ರಾಯರು ಮಾತ್ರ ವಿಚಲಿತರಾಗಲಿಲ್ಲ. ಸ್ವಂತ ಕಷ್ಟನಷ್ಟ ಎಲ್ಲವನ್ನು ಬದಿಗಿಟ್ಟು ನಾಡಿಗಾಗಿ ದುಡಿದರು, ಬಡಜನರ ಹೊಟ್ಟೆಪಾಡಿಗಾಗಿ ಹಳ್ಳಿ ಹಳ್ಳಿಯಲ್ಲೂ ಖಾದಿ ಕೆಲಸ ಏರ್ಪಡಿಸಿದರು. ಖಾದಿ ಹೊತ್ತು ಮಾರಿದರು. ಖಾದಿ ಹನುಮಂತರಾಯರು ಎಂದೇ ಹೆಸರು ಪಡೆದರು. ಹರಿಜನರ ಸೇವೆ, ದೇವದಾಸಿಯರ ವಿಮೋಚನೆಯ ಕಾರ್ಯ, ಸತ್ಯಾಗ್ರಹ, ಕ್ಷಾಮಪರಿಹಾರ ಕಾರ್ಯ ನಾನಾಬಗೆ ಅವರ ಸೇವೆ.

ಬಿಜಾಪುರದ ಬರಗಾಲದಲ್ಲಿ ರಾಯರು ಮಾಡಿದ ಸೇವೆ ಶ್ರೇಷ್ಠತಮ. 1943 ರಲ್ಲಿ ಬಿಜಾಪುರ ಪ್ರಾಂತದಲ್ಲಿ ಭೀಕರ ಬರಬಂತು. ಇತಿಹಾಸದಲ್ಲೇ ಕಂಡರಿಯದಬರ. ಇದರ ಚಿತ್ರಣವನ್ನೇ ಡಾ|| ರಂ. ಶ್ರೀ. ಮುಗಳಿ ತಮ್ಮ 'ಅನ್ನ' ಕಾದಂಬರಿಯಲ್ಲಿ ಕೊಟ್ಟಿದ್ದಾರೆ. ಆಗ ನಾಡಲ್ಲಿ ಕ್ವಿಟ್ ಇಂಡಿಯಾ ಚಳುವಳಿ. ನಾಯಕರೆಲ್ಲ ಜೈಲಿನಲ್ಲಿ ಇದ್ದರು, ಜನ ಜಾನುವಾರು ಸಾವಿರ ಗಟ್ಟಲೆ ಕಂಗಾಲಾಗಿ ಸಾವಿನ ಹೊಸಿಲಿನಲ್ಲಿ ಇದ್ದವು. ಹನುಮಂತರಾಯರು ಚಳುವಳಿಯಲ್ಲಿ ಸೇರಿರಲಿಲ್ಲ. ಕಾರಣ ಅವರ ಅನಾರೋಗ್ಯ. ಅನೇಕ ವರ್ಷಗಳ ದುಡಿತ ಅಲೆತಗಳ ಪರಿಣಾಮವಾಗಿ ಅವರು ಮೂರ್ಛೆ ರೋಗಕ್ಕೆ ತುತ್ತಾಗಿದ್ದರು. ಆದರೂ ಕೆಲಸವನ್ನು ನಿಲ್ಲಿಸಿರಲಿಲ್ಲ. ಆ ರೋಗಕ್ಕೆ ಸಾಮಾನ್ಯವಾಗಿ ಕೊಡುವ ಶಾಮಕ ಔಷಧಿಯನ್ನು ಸೇವಿಸಲು ರಾಯರು ಒಪ್ಪಲಿಲ್ಲ ವೈದ್ಯರು ನಿರುಪಾಯರಾದರು. ಕೊನೆಗೆ ರಾಯರು ದೇವರೇ ಗತಿ ಎಂದು ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಯವರಿಗೆ ಶರಣು ಹೋದರು. ಮಂತ್ರಾಲಯಕ್ಕೆ ಹೋಗಿ ಅಲ್ಲಿ ನಿರ್ದಿಷ್ಟ ಅವಧಿಯ ಸೇವಾವ್ರತ ಹಿಡಿದರು. ಆಗ ಅವರು ರಾಘವೇಂದ್ರ ಗುರುಗಳನ್ನೇ ಉದ್ದೇಶಿಸಿ ಬರೆದ ಒಂದು ಪತ್ರರೂಪದ ಬಿನ್ನಹ ಅವರ ಆತ್ಮನಿವೇದನವಾಗಿದೆ. ಬರೆದದ್ದು ಹೀಗೆ-

“ಇಷ್ಟು ಅಲ್ಪ ಅವಧಿಯಲ್ಲೇ ನೀವು ನನ್ನನು ಅನುಗ್ರಹಿಸುವಿರಿ ಎಂದು ನಾನು ನಿರೀಕ್ಷಿಸಲಾರೆ. ಏಕೆಂದರೆ ನನ್ನ ಸೇವೆ ಸಾಲದು ಎನ್ನುವುದು ಸ್ಪಷ್ಟ.

“ತಮ್ಮನ್ನೇ ನಂಬಿ, ತಮ್ಮ ಆಶೀರ್ವಾದದ ಮೇಲೆ ಶ್ರದ್ಧೆಯಿಡಬೇಕು ಎನ್ನುತ್ತಾರೆ ಜನ. ಆದರೆ ಶ್ರದ್ಧೆ ಹೇಳಿದರೆ ಬರಲಾರದು. ಪ್ರಶ್ನಿಸುವ ಪ್ರವೃತ್ತಿಯಲ್ಲಿ ನಾನು ಬೆಳೆದಿರುವುದು.

“ನನಗೆ ಗುಣ ಆದೀತೊ ಇಲ್ಲವೊ ಸ್ಪಷ್ಟವಾಗಿ ಹೇಳಬೇಕು. ತಾವು ಗುಣವಾಗಲಾರದವನು ಎಂದು ನನ್ನನ್ನು ತಾವು ಹೇಳಿದರೆ ನಾನೇನೂ ಆಕ್ಷೇಪಿಸುವುದಿಲ್ಲ.

“ನಿರುಪಯೋಗಿ ಜೀವನ ನನಗೆ ಹಿಡಿಸದು. ತಾವು ನನ್ನನ್ನೂ ಉಪಯೋಗಿಯಾಗಿಮಾಡಿ ಇಲ್ಲವೇ ನನ್ನ ಬಾಳನ್ನು ಮುಗಿಸಿ ಬಿಡಿ.

“ಉಪದೇಶ ಸಹಿತವಾಗಿದೆ ನನ್ನ ಸೇವೆ. ನಿಷ್ಕಾಮವಲ್ಲ. ನನ್ನ ದುರದೃಷ್ಟ. ಇದು ರಾಜಸ ಸೇವೆ.

ನಾ ಬಲ್ಲೆ, ಈ ನನ್ನ ಗತಿ ನಾನು ಮಾಡಿದ ಪಾಪಗಳ ಫಲ. ತಾವು ನನ್ನನ್ನು ಕ್ಷಮಿಸಲಾರಿರಾ?

“ನನ್ನನ್ನೇಕೆ ಆಸೆಯಿಂದ ಮರುಳು ಮಾಡುವಿರಿ? ತಮ್ಮ ಅನುಗ್ರಹದ ಬಗ್ಗೆ ನನಗೆ ನೆಚ್ಚಿಗೆ ಇಲ್ಲ.

“ತಾವು ನಿಜಕ್ಕೂ ನನ್ನನ್ನು ಅನುಗ್ರಹಿಸಿರುವಿರಾದರೆ, ಇನ್ನೂ ಮುಂದೆ ನಾನು ಮಾಡುವುದೆಲ್ಲ ತಮ್ಮ ಕಾರ್ಯವೇ. ತಾವೇ ನನ್ನ ಮೂಲಕ ಕಾರ್ಯ ಮಾಡುವಿರಿ. ನಾನು ತಮ್ಮ ಸಾಧನ ಮಾತ್ರ.”

ಈ ಆರ್ಶಭಾವದಿಂದ ಹನುಮಂತರಾಯರು ಗುರು ಸೇವೆಗೆ ತೊಡಗಿದರು. ಆದರೆ ಕೆಲವೇ ದಿನದಲ್ಲಿ ಬಂದ ಸುದ್ದಿ ಅವರನ್ನು ವಿಚಲಿತರಾಗಿಸಿತು. ಬಿಜಾಪುರ ಪ್ರಾಂತ್ಯ ಬರಗಾಲಕ್ಕೆ ತುತ್ತಾಗಿತ್ತು, ಜನ, ದನ ಕೂಳಿಲ್ಲದೆ ನೀರಿಲ್ಲದೆ ನರಳುತ್ತಿದ್ದರು. ಮಕ್ಕಳನ್ನೇ ಮಾರಿಕೊಳುತ್ತಿದ್ದರು. ದನಗಳನ್ನು ಕಟುಕರಿಗೆ ಮಾರುತ್ತಿದ್ದರು. ಇಲ್ಲವೇ ಕಳಚಿ ಬಿಡುತ್ತಿದ್ದರು. ಸತ್ತದನ ಕರು ಹೇರಳ. ಈ ವರದಿ ರಾಯರನ್ನು ತಟ್ಟಿತು. ದೀನ ದಲಿತರ ಪಶು ಪ್ರಾಣಿಗಳ ಕ್ಷೀಣ ಆರ್ತನಾದ ಅವರನ್ನು ವ್ರತವಿಮುಖರನ್ನಾಗಿಸಿತು. ಹಿಂದಿನ ಪುರಾಣಗಳಲ್ಲಿ ತಪಸ್ವಿಗಳು ಕಾಮಾದಿ ಪ್ರಲೋಭನಗಳಿಂದ ತಪೋ

ಭಂಗ ಪಡೆದುದನ್ನು ಕೇಳಿದ್ದೇವೆ. ಇಲ್ಲಿ ಆರ್ತರ ಗೋಳು ಕೇಳಿ ತಪೋಭಂಗ ಆಯಿತು. " ಜನ, ದನ ಇಂಥ ಸಂಕಟದಲ್ಲಿರುವಾಗ, ನಾನು ಇಲ್ಲಿ ದೂರದಲ್ಲಿ ಗುರುರಾಯರ ಸೇವೆಯಲ್ಲಿ ಅದರಲ್ಲೂ ಸ್ವಂತ ಆಸೆಯಿಂದ, ಮುಂದುವರಿಯಲಾರೆ" ಎಂದು ಕೊಂಡರು ಹನುಮಂತರಾಯರು. ಅವರ ಕಣ್ಣೆದುರು ಗುರುರಾಯರು ಇರಲಿಲ್ಲ. ಕಂಗಾಲಾಗಿ ಸಾಯುತ್ತಿದ್ದ ದನ, ಕರು ಮಕ್ಕಳು ಮುದುಕರು ಹೆಂಗಸರೇ ಕಣ್ಣ ಮುಂದೆ ಬಂದರು. ವ್ರತ ನಿಂತಿತು. ತಮ್ಮ ಸೂಕ್ಷ್ಮ ಆರೋಗ್ಯವನ್ನು ಲೆಕ್ಕಿಸದೆ ಹನುಮಂತರಾಯರು ಬಿಜಾಪುರಕ್ಕೆ ಧಾವಿಸಿ ಬಂದರು, ಹಳ್ಳಿ ಹಳ್ಳಿ ತಿರುಗಿ ಪರಿಸ್ಥಿತಿ ನೋಡಿದರು ಒಡನೆಯೆ ಕಾರ್ಯಪ್ರವೃತ್ತರಾದರು. ಮುಂಬೈಗೆ ಹೋಗಿ ಅಲ್ಲಿ ಠಕ್ಕರ್ ಬಾಪಾ ವೈಕುಂಠ ಲಾಲಮೆಹತಾ ಮುಂತಾದ ಗೆಳೆಯರನ್ನು ಕಂಡು, ಬಿಜಾಪುರ ಬರಪರಿಹಾರ ನಿಧಿ ಶೇಖರಿಸಲು ತೊಡಗಿದರು. ಹತ್ತು ಲಕ್ಷಕ್ಕೂ ಮೀರಿ ಹಣ ಸೇರಿಸಿ ತಂದರು. ಹಗಲು ರಾತ್ರಿ ದುಡಿದು ಓಡಾಡಿ ಊರೂರಲ್ಲೂ ಪರಿಹಾರ ವ್ಯವಸ್ಥೆ ಮಾಡಿದರು. ಸಾವಿನ ದವಡೆಯಿಂದ ಸಾವಿರಾರು ಮಂದಿಯನ್ನು ಹಸುಗಳನ್ನೂ ಬಿಡಿಸಿದರು. ಓಡಾಡುವಾಗ, ಕಚೇರಿಯಲ್ಲಿರುವಾಗ ಎಷ್ಟೋ ಸಲ ಮೂರ್ಛೆ ಬಂದು ಬಿದ್ದುದೂ ಉಂಟು. ರಾಯರಿಗೆ ಯಾವುದೂ ಲಕ್ಷ್ಯವಿಲ್ಲ, ನಿರಂತರ ದುಡಿದರು. ಜನ - ದನ ಉಳಿದರು. ರಾಯರು ಮಾತ್ರ ದಣಿದರು ಬಳಲಿದರು, ಅವರ ದೇಹ ಪೂರಾ ಸೋತಿತು, ರೋಗ ಉಲ್ಬಣಿಸಿತು, ಕೊನೆಗೆ 1945 ಜೂನ್ 10 ರಂದು ರೋಗಕ್ಕೆ ಬಲಿಯಾದರು.

ದೀನ ದರಿದ್ರರ ಸಂಕಟ ನಿವಾರಣೆಗಾಗಿ ತಾವು ಆರೋಗ್ಯಕ್ಕಾಗಿ ಮಾಡುತ್ತಿದ್ದ ದೇವರ ಸೇವೆಯನ್ನು ಅರ್ಧಕ್ಕೇ ಬಿಟ್ಟು ಬಂದು ಕರ್ಮಯೋಗದಲ್ಲಿ ನಿರತರಾಗಿ ಅದರಲ್ಲೆ ಬಲಿದಾನ ಮಾಡಿದ ಕೌಜಲಗಿ ಹನುಮಂತರಾಯರ ಈ ಪ್ರಸಂಗ ವಿಶಿಷ್ಟವಾದದ್ದು, ವಿಶೇಷವಾದದ್ದು. ನಮ್ಮೆಲ್ಲರ ಕಣ್ಣನ್ನು ತೆರೆಯಿಸುವಂಥದು.

---

### ಗುರು ಬಸವಣ್ಣನೇ ಶರಣು

ಬಸವಣ್ಣನೇ ಶರಣು, ಬಸವಣ್ಣನೇ ಶರಣು,
ಬಸವಣ್ಣನೇ ಪರಮ ಬಂಧುವೆನಗೆ
ವಸುಧೀಶ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ,
ನಿಮ್ಮ ಹೆಸರಿಟ್ಟ ಗುರು ಬಸವಣ್ಣನಯ್ಯಾ.

— ಸಿದ್ಧರಾಮೇಶ್ವರ

### ಬಸವನ ವಿಚಾರ ಪತ್ನಿ

ಬಸವನ ಅನುಭಾವದಿಂದ ವಿವರವ ಕಂಡು,
ವಿಚಾರ ಪತ್ನಿಯಾದೆನಯ್ಯ ಸಂಗಯ್ಯ.

—ನೀಲಾಂಬಿಕಾ

# ರಾಷ್ಟ್ರ ಮತ್ತು ಯುವಶಕ್ತಿ

ಕೆ.ವಿ. ಚಂದ್ರಣ್ಣಗೌಡ, ೩೭, ಚಿಕ್ಕಮ್ಮ ಬಿಲ್ಡಿಂಗ್, ಐಯ್ಯಣ್ಣ ಶೆಟ್ಟಿ ಬಡಾವಣೆ, ಮೈಸೂರು ರಸ್ತೆ, ಬೆಂಗಳೂರು-560026.

ಇಂದು ರಾಷ್ಟ್ರದಲ್ಲಿ ಭಾವೈಕ್ಯತೆ, ಸೋದರತ್ವ, ಸ್ವಾತಂತ್ರ್ಯ, ಸಮಾನತೆ ಮೂಡಿಸುವ ದಿಶೆಯಲ್ಲಿ ಯುವಶಕ್ತಿ ಅಪೂರ್ವ ಪಾತ್ರವಹಿಸಬೇಕಾಗಿದೆ. ಭವ್ಯ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ, ತನ್ನ ರಾಷ್ಟ್ರದಲ್ಲಿ ಸಂಸ್ಕೃತಿ, ಸಾಹಿತ್ಯ ಹಾಗೂ ರಾಜಕಾರಣದ ಸಂಪತ್ತನ್ನು ಅಭಿವೃದ್ಧಿಗೊಳಿಸುವಲ್ಲಿ ಯುವ ಜನರು ಸದಾ ಶ್ರಮಿಸಬೇಕು.

ಮಹಾತ್ಮಗಾಂಧೀಜಿಯವರು ಹೇಳಿರುವಂತೆ - ‘ ಯುವಜನರು ತಮ್ಮ ತಮ್ಮ ದೊಡ್ಡಸ್ಥಿಕೆಗಾಗಿ ಮಾಡುವ ದುಂದುವೆಚ್ಚವನ್ನು ಬಿಟ್ಟು ಸರಳವಾಗಿ ಬದುಕುವ ಸುಮಾರ್ಗವನ್ನು ಅವಲಂಬಿಸಬೇಕು. ಜಾತಿ, ಬಣ್ಣ ಲಿಂಗಬೇಧ ಇವುಗಳ ದ್ವೇಷವನ್ನು ಬದಿಗಿಟ್ಟು ಪರಸ್ಪರ ಸಹಕಾರ, ಅರಿವು ಒಡಂಬಡಿಕೆಯಿಂದ ಬದುಕಿ ತಮ್ಮ ಭಾವನೆಗಳನ್ನು ಅರಳಿಸಬೇಕು. ಕ್ಷುಲ್ಲಕ ಕಾರಣಗಳಿಗಾಗಿ ಯುವ ಜನರು ನಿರಾಶವಾದಿಗಳಾಗಬಾರದು. ಆತ್ಮಸ್ಥೈರ್ಯ ಹಾಗೂ ಅಂತಃಸಾಕ್ಷಿಗಳನ್ನು ಪಡೆಯಲು ಲವಲವಿಕೆಯಿಂದ ಕಾರ್ಯೋನ್ಮುಖರಾಗಬೇಕು. ಕರಾಳ ಸಮಸ್ಯೆಗಳ ವಿರುದ್ಧ, ಭ್ರಷ್ಟ ಸಮಾಜದ ವಿರುದ್ಧ ಹೋರಾಡಿ ಹೊಸ ಸಮಾಜವನ್ನು, ಹೊಸ ಸಂಸ್ಕೃತಿಗಳನ್ನು ಸೃಷ್ಟಿಸುವಲ್ಲಿ ಉಜ್ವಲ ವೀರರಾಗಬೇಕು. ರಾಷ್ಟ್ರದ ವಿರುದ್ಧ ಬೆಂಕಿ ಕಾರುವ ವಿಚ್ಛಿದ್ರಕಾರಕ ಶಕ್ತಿಗಳ ಎದುರಿಗೆ ಎದೆಗೊಟ್ಟು ಹೋರಾಡುವ ರಾಷ್ಟ್ರಪ್ರೇಮಿಗಳಾಗಬೇಕು. ಇದರಿಂದ ಹಿಂಸೆಯುನ್ನು ಹೋರಾಟದಲ್ಲಿ ಸ್ವೀಕರಿಸಬೇಕೆಂದು ಅರ್ಥವಲ್ಲ. ಹಾಕಿ ಕೊಟ್ಟಿರುವ ಸತ್ಯಾಗ್ರಹ, ಗಾಂಧೀಜಿಯವರ ಅಹಿಂಸಾ ಮಾರ್ಗ ಇವುಗಳಿಂದ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬೇಕು. ಯುವಶಕ್ತಿ ಯಾವಾಗಲೂ ಶಾಂತಿ, ನೆಮ್ಮದಿಯ ಪ್ರತೀಕಗಳಾಗಿರಬೇಕು.

ಯುವಶಕ್ತಿ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಹಕ್ಕುಗಳಿಗಾಗಿ ಹೋರಾಡಬೇಕು; ಅಲ್ಲದೆ ಆರೋಗ್ಯಕರವಾದ ಚಳುವಳಿ, ಮುಷ್ಕರ ಮುಂತಾದ ಕಾರ್ಯಚಟುವಟಿಕೆಗಳನ್ನು ಸದಾ ಬೆಂಬಲಿಸಬೇಕು. ಮಾನವನ ಸರ್ವ ವಿಧ ಹಕ್ಕು ಬಾಧ್ಯತೆಯ ರಕ್ಷಣೆಯ ಹೊಣೆ ಸಂಪೂರ್ಣವಾಗಿ ಯುವಜನತೆಯ ಮೇಲಿದೆ. ಇಂದು ಯುವಜನತೆ ಉದ್ಯೋಗ, ವಿದ್ಯೆ, ಮುಂತಾದ ಅವಕಾಶಗಳಿಂದ ವಂಚಿತರಾಗಿರುವುದು ಸಹಜ. ಆದರೆ ಇದರಿಂದ ನಿರಾಶಗೊಂಡು ಹಿಂಸೆ, ಅನ್ಯಾಯ ದರೋಡೆ ಮಾರ್ಗಗಳಿಗೆ ಇಳಿಯಬೇಕಾಗಿಲ್ಲ. ಸ್ನೇಹ, ಒಗ್ಗಟ್ಟು, ಉಲ್ಲಾಸದಿಂದ ಬದುಕುವುದನ್ನು ಕಲಿಯಬೇಕು. ಮನುಷ್ಯನ ಬದುಕು ದೊಡ್ಡದು; ಈ ಬದುಕಿನಲ್ಲಿ ಉಲ್ಲಾಸ, ತಲ್ಲಣ, ಬಡತನ, ಸಿರಿತನ ಎಲ್ಲವೂ ಇರುತ್ತದೆಂಬುದರ ಅರಿವು ಯುವ

ಶಕ್ತಿಯಲ್ಲಿ ಮೂಡಬೇಕು. ಒಟ್ಟಾರೆ ಇಂದಿನ ಹಾಗೂ ನಾಳಿನ ಸವಾಲುಗಳನ್ನು ಎದುರಿಸವಲ್ಲಿ ಯುವಶಕ್ತಿಯ ಪಾತ್ರ ವಿಶಿಷ್ಟವಾದುದು. ರಾಷ್ಟ್ರ ಹಾಗೂ ತನ್ನನ್ನು ದುರ್ಬಲಗೊಳಿಸುತ್ತಿರುವ ಎಲ್ಲಾ ದುಷ್ಟ ಶಕ್ತಿಗಳ ವಿರುದ್ಧ ಯುವಶಕ್ತಿ ಸದಾ ಜಾಗೃತವಾಗಿರಬೇಕಾಗಿರುವುದು ಒಳಿತು. ರಾಷ್ಟ್ರದಲ್ಲಿನ ಸಮಕಾಲೀನ ತುರ್ತು ಸಮಸ್ಯೆಗಳನ್ನು ಕುರಿತು ಗಂಭೀರವಾಗಿ ಚಿಂತಿಸಿ, ಚರ್ಚಿಸುವುದು; ನ್ಯೂಕ್ಲಿಯರ್ ಹಾಗೂ ಅಣುಬಾಂಬುಗಳ ದಳ್ಳುರಿಯಿಂದ, ಕ್ರೌರ್ಯದ ಸಾವಿನಿಂದ ಮಾನವ ಕುಲವನ್ನು ರಕ್ಷಿಸುವಲ್ಲಿ ಸನ್ನದ್ಧರಾಗುವುದು, ಪರಸ್ಪರ ತಿಳುವಳಿಕೆಯ ಹಾಗೂ ಸ್ನೇಹದ ವಾತಾವರಣದಲ್ಲಿ ಸಮಸ್ಯೆಗಳಿಗೆ ಪರಿಹಾರ ಕಂಡು ಹಿಡಿದು, ಸನ್ನಿವೇಶವನ್ನು ತಿಳಿಯಾಗಿಸುವ ಜವಾಂಬ್ದಾರಿ ಇಂದಿನ ಯುವಶಕ್ತಿಯ ಮೇಲಿದೆ ಆದುದರಿಂದ ಇದಕ್ಕಾಗಿ ಯುವಶಕ್ತಿಯಲ್ಲಿ ಅಚಲವಾದ ಶ್ರದ್ಧೆ, ಗುರಿ, ಸಂಯಮ ಅತ್ಯಗತ್ಯ.

ರಾಷ್ಟ್ರ ನಿರ್ಮಾಣದ ಅಗಾಧಕಾರ್ಯಕ್ಕೆ ಸಾಧ್ಯವಾದ ಎಲ್ಲಾ ಸಂಪನ್ಮೂಲನಗಳನ್ನು ಬೆಳಸಿ ಕೊಳ್ಳುವುದರೊಂದಿಗೆ; ಯುವಶಕ್ತಿಯ ಪ್ರತಿಭೆ ಮಿಳಿತವಾದರೆ, ಯಾವುದೇ ರಾಷ್ಟ್ರ ಭದ್ರ ಭುನಾದಿಯ ಮೇಲೆ ನಿಲ್ಲಲು ಸಾಧ್ಯವಾಗುತ್ತದೆ. ಇಂದು ನಮ್ಮ ರಾಷ್ಟ್ರದಲ್ಲಿ ನಗರಹಾಗೂ ಗ್ರಾಮಗಳ ನಡುವೆ ಆಗಾಧ ಕಂದರ ಸೃಷ್ಟಿಯಗುತ್ತಿರುವುದು ಕಂಡು ಬರುತ್ತಿದೆ. ಇಂತಹ ವಿಭಜನೆ ರಾಷ್ಟ್ರ ನಿರ್ಮಾಣದ ದೃಷ್ಟಿಯಿಂದ ಹಾಗೂ ಯುವಶಕ್ತಿಯ ಬೆಳವಣಿಗೆಗೆ ಮಾರಕವಾದ ಅಂಶ. ರಾಷ್ಟ್ರವನ್ನು ಅಭಿವೃದ್ಧಿ ಮತ್ತು ಪ್ರಗತಿಯ ದಿಕ್ಕಿನಲ್ಲಿ ಕೊಂಡೊಯ್ಯಲು ಅತ್ಯಗತ್ಯವಾದ ಸಾಮರ್ಥ್ಯ ಹಾಗೂ ಪ್ರತಿಭೆ ಗ್ರಾಮೀಣ ಯುವಜನಕ್ಕೂ ಇದೆ ಎಂಬ ವಾತಾವರಣವನ್ನು ಸೃಷ್ಟಿ ಮಾಡುವಲ್ಲಿ ವಿದ್ಯಾವಂತ ಯುವಜನತೆ ಶ್ರಮಿಸಬೇಕು. ನಗರ ಹಾಗೂ ಗ್ರಾಮೀಣ ಯುವ ಜನತೆ ತಂತಮ್ಮ ಭವಿಷ್ಯ ರೂಪಿಸಿಕೊಳ್ಳಲು ಅಗತ್ಯವಾದ ಉತ್ತೇಜನ ನೀಡುವುದು ನಮ್ಮೆಲ್ಲರ ಕರ್ತವ್ಯ.

ಇಪ್ಪತ್ತನೆಯ ಶತಮಾನದ ಮಹಾನ್ ಚಿಂತಕರಲ್ಲಿ ಒಬ್ಬರಾದ ಶ್ರೀ ಜಯಪ್ರಕಾಶ್ ನಾರಾಯಣವರು ಯುವಜನತೆಯ ಬಗ್ಗೆ ಅಪಾರ ಕಾಳಜಿಯುಳ್ಳವರಾಗಿದ್ದು; ದೇಶದ ಪ್ರಜಾಪ್ರಭುತ್ವದಲ್ಲಿ ಯುವಜನರ ಸ್ಥಾನ ಬಹು ಪ್ರಮುಖವಾದದು ಎಂದ ಅವರು 'ನಾಡಿನಲ್ಲಿ ನೈತಿಕ ಪ್ರಜ್ಞೆ ಅರಳಲು, ಬಡತನ, ನಿರುದ್ಯೋಗ ತೊಲಗಲು ಹೋರಾಡುವಂತೆ ಯುವಜನರು ಎಚ್ಚೆತ್ತುಕೊಳ್ಳಬೇಕೆಂದು 'ಸಂಪೂರ್ಣ ಕ್ರಾಂತಿ' ಎಂಬ ಚಳುವಳಿಯನ್ನೇ ಹುಟ್ಟುಹಾಕಿದರು. ಎಲ್ಲಾ ಕ್ಷೇತ್ರಗಳಲ್ಲಿ ಭ್ರಷ್ಟತೆ ತೊಲಗುವಂತೆ ಯುವಜನರು ಹೋರಾಡಬೇಕೆಂದು ರೆಯಿತ್ತರು. ಸ್ವತಂತ್ರ್ಯ ಭಾರತದಲ್ಲಿ ಶ್ರೀಯುತರು ಬಿಟ್ಟು ಹೋಗಿರುವ ವಿಚಾರಧಾರೆಗಳು ಇಂದಿನ ಯುವಜನಕ್ಕೆ ಪ್ರೇರಕವಾದ ನೈತಿಕ ಶಕ್ತಿಯಾಗಿದೆ. ಒಟ್ಟನಲ್ಲಿ ರಾಷ್ಟ್ರ ನಿರ್ಮಾಣ ಕಾರ್ಯಕ್ರಮದಲ್ಲಿ ಯವಜನತೆ ಒಟ್ಟುಗೂಡಿ ಯುವಶಕ್ತಿ ಚೇತನದ ಮುಖಾಂತರ ಸಮಗ್ರ ಭಾರತವನ್ನು ಮುಂದಿನ ಶತಮಾನದತ್ತ ಒಯ್ಯಬೇಕಾದ ಗುರುತರ ಹೊಣೆಗಾರಿಕೆ ಇದೆ.

# ವಿಶ್ವ, ಪರೀಕ್ಷೆಯರಂಗ

ಎ ಬಿ ಚನ್ನಬಸಪ್ಪ, ನಿವೃತ್ತ ಮುಖೋಪಾಧ್ಯಾಯರು, ಎಫ್/1
"ಬಸವಪ್ರಸಾದ" ಶಂಕರಮಠ ಕ್ರಾಸ್ ।।. ಕಿಲ್ಲೆ – ಮೈಸೂರು - 4

...ಶ್ವ ಪದ ಪುಟ್ಟದು. ಆದು ಎಂದೂ ಯಾರಿಗೂ ಸಂಪೂರ್ಣ ತೆರೆದು ತೋರಿಸದ ಪರೀ...ಯ ರಂಗ. ಈ ಸಂಗತಿ ಪ್ರತಿಯೊಬ್ಬರಿಗೂ ಉಂಟು. ಒಬ್ಬಾತ ತಾಯಿಯ ಗರ್ಭ...ಲ್ಲಿ ಸೂಕ್ಷ್ಮ ಅಣುವಿನಲ್ಲಿ ಅಣು ಕ್ರಿಮಿಯಾಗಿ, ಕ್ರಮೇಣ ಪ್ರಕೃತಿಯ ನಿಯಮ...ಂತೆ, ಅಂಗಾಂಗಳಂ ಪಡೆಯುತ್ತ ಆ ಪುರುಷನ ಬಿತ್ತನೆಯ ಗುಣ ಶಕ್ತಿಯಂತೆ, ಅಲ್ಲದೆ ...ಸ್ತ್ರೀಯ ಆ ಕಾಲದ ಮನಸ್ಸಿನ ಮತ್ತು ಶರೀರದ ವ್ಯವಹಾರದಂತೆ, ಬೆಳೆಯುತ್ತಾ ...ಮಗು ಬರುತ್ತಿರುವುದು !

ಇದರ ಸಮರ್ಥನೆಗೆ ನಮ್ಮ ಪೂರ್ವಿಕರು ಅನೇಕ ಸಮರ್ಥನೆಗಳಂ ತಿಳಿಸಿ...ವರು. ಶ್ರೀ ಕೃಷ್ಣ ತನ್ನ ಸಹೋದರಿ ಪೂರ್ಣ ಗರ್ಭಿಣಿಯಾಗಿದ್ದಾಗ ತನ್ನ ಪಟ್ಟ...ಕ್ಕೆ ಕರೆದೊಯ್ಯುತ್ತಿದ್ದಾಗ, ಯುದ್ಧ ಕಾಲದಲ್ಲಿ ಚಕ್ರ ವ್ಯೂಹ ಕೋಟೆಯನ್ನು, ಹೇಗೆ ...ಪ್ರವೇಶಿಸುವುದು? ಎಂಬ ಭಾಗದ ತಿಳುವಳಿಕೆಯನ್ನು ತಿಳಿಸುತ್ತಿರುವಾಗ, ಆಲಿಸುವ ...ತ್ಸನಿ "ಹೂಂ ಹೂಂ" ಕೇಳಿ ಬರುತ್ತಿತ್ತು. ಶ್ರೀ ಕೃಷ್ಣ ಚತುರ. ತನ್ನ ಮುಂದಿನ ಪ್ರತಾ...ಕ್ಕೆ ಕುಂದು ಉಂಟಾಗುವುದೊ ಎಂಬ ಸ್ವಾರ್ಥತೆಯಿಂದ ಅಲ್ಲಿಗೆಯೇ ನಿಲ್ಲಿಸಿದನು. ...ದುದರಿಂದ ಆ ಅಭಿಮನ್ಯು ಮಹಾಭಾರತದ ಯುದ್ಧದಲ್ಲಿ, ಚಕ್ರವ್ಯೂಹ ಕೋಟೆ...ಯಂ ಪ್ರವೇಶಿಸಿ, ಅಲ್ಲಿಂದ ಹೊರಬರಲು ಆಗಲಿಲ್ಲ. ಏಕೆ? ಗರ್ಭದಲ್ಲಿರುವಾಗ ಅಷ್ಟು ...ಮಾತ್ರ ತಿಳಿಯಲು ಅವಕಾಶವಾಯಿತು. ಇದು ಪರೀಕ್ಷೆಯಕಾಲವಲ್ಲ ಉತ್ತರ.

ಪಂಚ ಭೂತಗಳಿಂದ ಪ್ರಪಂಚ, ಅವು ಒಟ್ಟಿಗೆ ಸೇರಿಕೊಂಡು ಪ್ರಕೃತಿಯ ...ಜ್ಞಾನುಸಾರ, ಪರೀಕ್ಷಾಕ್ಷೇತ್ರವಾಗಿ, ರಚಿಸಿಕೊಂಡು ಪರೀಕ್ಷೆಯನ್ನು ನಡೆಸುತ್ತಿರು...ವುವು. ಮಾನವ ಪರೀಕ್ಷೆಯ ಅಭ್ಯರ್ಥಿ, ಈ ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ...ತೇರ್ಗಡೆಯಾಗಬೇಕು. ಆಗ ಮಾತ್ರ ಅವರುಗಳಿಗೆ ಕೈಲಾಸ (ಸುಖ) ಪ್ರಾಪ್ತಿ.

ಮೊದಲನೆಯ ದೇವರು ಪೃಥ್ವಿ. ಹುಟ್ಟುವುದು ಮಣ್ಣಿನಲ್ಲೇ. ಕೊನೆಯಾ...ಗುವುದು ಮಣ್ಣಿನಲ್ಲೇ, ಚಿನ್ನಹಾಕಿದರೆ ಚಿನ್ನ ಬೆಳೆಯುತ್ತೆ, ನಿಕ್ಕಲ್ ಲೋಹಗಳು ...ಮಣ್ಣಿನಲ್ಲಿ ಸಕ್ಕಲ್ ಬೆಳಸು ಮಣ್ಣಿನಲ್ಲಿ, ರೈತನ ಜೀವನಾಡಿ ಮಣ್ಣು. ರೈತನಿಲ್ಲದೆ ಪೃಥ್ವಿ ...ಇಲ್ಲ. ಆದಿಯಲ್ಲಿ ಆಯ್ಯಾಯ ಕಸುಬುದಾರರು ಇಲ್ಲದಿರುವಾಗ್ಗೆ ಭೂಮಿ ಬೆಳಸನ್ನು ...ಕೊಡುತ್ತಿತ್ತು. ಕಾಡು ಪ್ರಕೃತಿಯ ಪ್ರಸಾರವಲ್ಲವೆ ? ಭೂಮಿ ಬಿಟ್ಟು ಕಾಡು ಉಂಟೆ?

ಇದು ಅದರ ರಂಗದಲ್ಲಿ ಬಹಳ ಪ್ರಾಮುಖ್ಯ. ಯಾವ ಅಭ್ಯರ್ಥಿಯೇ ಆಗಿರಲಿ ಆತನ ಶರೀರವೆಂಬ ಯಂತ್ರದಲ್ಲಿ ಮುಕ್ಕಾಲು ಭಾಗಕ್ಕಿಂತ ಹೆಚ್ಚಾಗಿ ನೀರಿನ ಭಾಗ ಇರಲೇ ಬೇಕು. ಪ್ರಕೃತಿ (ದೇವರು) ಬಹು ಆಲೋಚನಾಪರ. ಪೃಥ್ವಿಯಲ್ಲಿ ನೀರಿನ ಭಾಗವೇ ಹೆಚ್ಚು, ಆ ನೀರಿನಿಂದಲೇ ಭೂಮಿಯು ಸುತ್ತವರಿದಿದೆ. ನೀರಿನಿಂದ ಪ್ರಾಣಿ ವರ್ಗ ಸಸ್ಯವರ್ಗ ಮಳೆಗಾಲದಲ್ಲಿ ಮೋಡಗಳು ಮಳೆ ಸುರಿಸುತ್ತವೆ. ಆದರಿಂದ ಧರೆಯು ಜೀವಂತವಾಗಿ ಉಳಿದಿದೆ. ಒಳ್ಳೆಯದಕ್ಕೂ ಕೆಟ್ಟದಕ್ಕೂ ಬೇಕು. ಮಗು ಹುಟ್ಟಿ ದಾಗ ತೊಳೆಯುವುದಕ್ಕೆ ಸತ್ತಾಗ ತೊಳೆಯುವುದಕ್ಕೆ ನೀರು ಬೇಕಲ್ಲವೆ? ಅಂದ ಮೇಲೆ ನೀರು ಇಲ್ಲ ನಾವು ಇಲ್ಲ!

ಸೂರ್ಯ ಮೊಟ್ಟ ಮೊದಲನೇಯ ಅಗ್ನಿ. ಪೃಥ್ವಿ ಮೊದಲನೆಯ ದರ್ಶನ. ಆತನಿಂದಲೇ ಶಾಖ ಮತ್ತು ಬೆಳಕು. ಕ್ರಮೇಣ ನಮ್ಮ ಅಗ್ನಿ. ಅಗ್ನಿಯನ್ನು ಬೇಡ ಅನ್ನುವವ್ಯಕ್ತಿಯು ಇಲ್ಲವೇ ಇಲ್ಲ. ಆತ ಏನೇ ಆಗಿರಲಿ ದಿವಾನನಾಗಿರಲಿ-ಜವಾನನಾಗಿರಲಿ ಗುಡಿಸುವನಾಗಿರಲಿ ಏಕೆ ಮನೆ ಮಠವಿಲ್ಲದೆ ಮರದ ಕೆಳಗೆ ವಾಸಿಸುತ್ತಿರಲಿ-ಅರಮನೆ ಯಲ್ಲಿ ಯಾಗಲಿ ಇಲ್ಲವೇ ರಾಷ್ಟ್ರಪತಿಯ ಭವನದಲ್ಲಾಗಲಿ: ಬಿಳಿಯವನಾಗಿರಲಿ-ಕಪ್ಪಿ ನವನಾಗಲಿ ಅಂತು ಒಟ್ಟಿನಲ್ಲಿ ಯಾರೇ ಆಗಿರಲಿ, ಅಗ್ನಿ ಬೇಕೆ ಬೇಕು.

ಋಷ್ಯಾಶ್ರಮಗಳಲ್ಲಿ ಅವರ ದೇವರೇ ಅಗ್ನಿ. ಅಗ್ನಿಪೂಜೆಯೇ ಮೊದಲನೆಯ ಕರ್ತವ್ಯ ಅನ್ನ, ಆಹಾರ, ನೀರು ಮೊದಲಾದ ಸಾಧನಗಳು ಕೆಲದಿನಗಳಿಲ್ಲದೆ ಬದಕಬಹುದು. ಗಾಳಿ(ವಾಯು) ಕೇವಲ ಐದು ನಿಮಿಷವಿಲ್ಲ, ಆತ ಇಲ್ಲ. ಪ್ರಪಂಚಕ್ಕಾದರೆ ಅದುಕೂಡ ಇಲ್ಲ!. ಒಂದು ಗಾಜಿನ ಶೀಸೆಯಲ್ಲಿ ಒಂದು ಪ್ರಾಣಿ ಉದಾ: ಒಂದು ಜಾತಿಯ ಹುಳು ವನ್ನು ಹಾಕಿ ಅದರ ಬಿರುಡೆಯನ್ನು ಒಳಗಿನ ಗಾಳಿ, ಹೊರಗೆ ಬರದಂತೆಯೂ ಹೊರಗಿನ ಗಾಳಿಯು ಒಳಗೆ ಹೋಗದಂತೆಯೂ ಹಾಕುವುದು. ಒಳಗೆ ಗಾಳಿ ಇರುವ ತನಕ ಜೀವಂತವಾಗಿರುತ್ತದೆ. ನಂತರ ಸಂಕಟದಿಂದ ಹೊರಳಾಡಿ ಕೊನೆಗೆ ಸಾಯುವುದು.

ಅದು ಸಾಯಲು ಕಾರಣ ಹೊರಗಿನ ಗಾಳಿ ಇಲ್ಲದಿದುದರಿಂದ. ಅಂದಮೇಲೆ ಗಾಳಿ ಬೇಕೇ ಬೇಕು. ಗಾಳಿಇಲ್ಲ ನಾವು ಇಲ್ಲ!.

ಆಕಾಶ ಪೃಥ್ವಿಗೆ ರಕ್ಷೆ. ಸೂರ್ಯ-ಚಂದ್ರರ ನೆಲೆ ಆಕಾಶ. ಆಳತೆಗೆ ಗಾತ್ರಕ್ಕೆ ಮೀರಿರುವ ನಕ್ಷತ್ರಗಳು ಆಕಾಶದಲ್ಲಿ ಅಷ್ಟುದೂರ ಏಕೆ? ಪೃಥ್ವಿಯೂ ಕೂಡ ಆಕಾಶದಲ್ಲಿ. ನಾವೆಲ್ಲವೂ ಆಕಾಶದಲ್ಲಿ, ಪಕ್ಷಿಗಳಿಗಂತೂ ಆಕಾಶವೇ ನೈಜ ತಾಣ. ಅದರ ಆಳತೆಯನ್ನು ತಿಳಿದಿರುವವನು ಅವನೊಬ್ಬನೇ (ದೇವರು). ಆದುದರಿಂದ ಸಕಲಕ್ಕೂ ಆಕಾಶವೇ !

ಪ್ರಕೃತಿಯ ಐದು ಪ್ರಶ್ನೆಪತ್ರಿಕೆಗಳನ್ನು ನಿಷ್ಠೆಯಿಂದ ಉತ್ತರಿಸಿರುವನು ಯಾವ ಪೇಪರನ್ನು ತೆಗೆದುಕೊಂಡರೂ ಅದು ತನ್ನದೇ ಆದ ಶಕ್ತಿ ಸಾಮರ್ಥ್ಯದಿಂದ ಕೂಡಿದೆ ಉಳಿದ ಪೇಪರು(ಶಕ್ತಿ) ಇಲ್ಲದಿದ್ದರೆ ಈ ಪೇಪರು ಪ್ರಯೋಜನಕ್ಕೆ ಬರಲಾರದು. ಬಹಳ ಕಠಿಣವಾದ ಪೇಪರು ಅಂದರೆ ವಾಯು (ಗಾಳಿ) ಅದನ್ನು ಉತ್ತರಿಸುವಾಗಲು ವಾಯು ಬೇಕಿತ್ತು. ಈಗಲೂ ಬೇಕು ಮುಂದಕ್ಕೂ ಬೇಕು.

ಈ ಕಾರಣವನ್ನೇ ಅರಿತಿರುವ ಪ್ರಕೃತಿಯು ಪೃಥ್ವಿ ಮತ್ತು ಆಕಾಶಗಂಗೆಗಳನ್ನು ವಾಯುವಿನಿಂದ ತುಂಬಿಸಿದೆ. ಒಟ್ಟಿನಲ್ಲಿ ಈ ರಂಗದ ಪರೀಕ್ಷೆಗಳಿಂದ ತಿಳಿದಿದುದು ಏನು? ಅಂತ ನಮಗೆ ನಾವೇ ಪ್ರಶ್ನೆ ಹಾಕಿಕೊಂಡರೆ :-

ಈ ಪಂಚಭೂತಗಳು ಒಂದಕ್ಕೊಂದು ಸಹಕರಿಸಿ ಕೊಂಡು ಒಟ್ಟಾಗಿ ಸೇರಿ ಪೃಥ್ವಿ ಆಗಿದೆ, ಈ ಪಂಚಭೂತಗಳಿಂದಲೇ ನಮ್ಮ ಶರೀರ ಆಗಿರುವುದು.

ಅಂತೂ ಇಂತ ದೈವದತ್ತವಾದ ಪರೀಕ್ಷೆಯ ಲಭ್ಯವಾಗಿ ಎಲ್ಲಾ ಪ್ರಶ್ನೆ ಪತ್ರಿಕೆಗಳಿಗೆ ಉತ್ತರಿಸಿದುದು ನನ್ನ ಗುರುಗಳ ಆಶೀರ್ವಾದ.

---

# ಶಿವಾನುಭವ ಚಿಂತಕ, ಶರಣ ಫ. ಗು. ಹಳಕಟ್ಟಿ

ಶ್ರೀಮತಿ ಲಲಿತಾಂಬ ವೃಷಭೇಂದ್ರ ಸ್ವಾಮಿ.

ಸಾಹಿತ್ಯಕ್ಷೇತ್ರ, ರಾಜಕೀಯ ಕ್ಷೇತ್ರ, ಶೈಕ್ಷಣಿಕ ಕ್ಷೇತ್ರ, ಸಾಮಾಜಿಕ ಅಥವಾ ಧಾರ್ಮಿಕ ಕ್ಷೇತ್ರ ಹೀಗೆ ಯಾವುದೋ ಒಂದು ಕ್ಷೇತ್ರದಲ್ಲಿ ಮಹತ್ತರ ಸಾಧನೆಗಳನ್ನು ಸಾಧಿಸಿದ ಅನೇಕರನ್ನು ಕಾಣಬಹುದು. ಆದರೆ ಇವೆಲ್ಲವುಗಳಲ್ಲೂ ಉತ್ತುಂಗಸ್ಥಾ ವನ್ನು ಮುಟ್ಟಿದಂತಹ ವ್ಯಕ್ತಿಗಳು ಬಹಳ ವಿರಳ. ಜಗತ್ತನ್ನೇ ಹುಡುಕಿದರೂ ಕೇವ ಬೆರಳೆಣಿಸುವಷ್ಟು ಮಂದಿ ಸಿಕ್ಕಬಹುದು. ಅಂತಹ ಜಗತ್ತಿನ ಅತಿ ವಿರಳ ವ್ಯಕ್ತಿಗಳ ರಾಮ ಬಹದ್ದೂರ ಹಳಕಟ್ಟಿಯವರ ಹೆಸರು ಕನ್ನಡ ನಾಡಿನಲ್ಲಿ ಎದ್ದು ಕಾಣು ವಂತಹ ಸ್ಥಾನ ಪಡೆದಿದೆ

ಶರಣ ಹಳಕಟ್ಟಿಯವರ ಜೀವನ ಚರಿತ್ರೆಯ ಬಗ್ಗೆ ಕಣ್ಣಾಡಿಸಿದರೆ ಅವರ ಅದ್ಭು ಸಾಧನೆಗಳು ಪರಿಚಯವಾಗುತ್ತದೆ. ಒಬ್ಬ ವ್ಯಕ್ತಿ ಯಾವ ಸಂಘ ಸಂಸ್ಥೆಗಳ ಬ ವಿಲ್ಲದೆ ಏಕಾಂಗಿಯಾಗಿ ಇಷ್ಟೊಂದು ಸಾಧನೆಗಳನ್ನು ಸಾಧಿಸಲು ಸಾಧ್ಯವೇ ಎಂದು ಬೆ ಗುಗೊಳ್ಳಬೇಕಾಗುತ್ತದೆ. ಇದೊಂದು ಪವಾಡವಿರಬೇಕು ಎನ್ನಿಸುತ್ತದೆ. ಆದರೆ ಇದ ಸಂಪೂರ್ಣ ಸತ್ಯವೆಂದು ಅರಿತಾಗ, ಸಹೃದಯ ಅವರ ಆತ್ಮಕ್ಕೆ ಕೈ ಜೋಡಿಸುತ್ತಾನೆ

ಶ್ರೀ ಹಳಕಟ್ಟಿಯವರು ಸರಳತೆ ಸಜ್ಜನಿಕೆ ದಕ್ಷತೆಯ ತ್ರಿವೇಣಿ ಸಂಗಮದಂ ದ್ದರು. ಲೌಕಿಕ, ಪಾರಮಾರ್ಥಿಕಗಳೆರಡನ್ನೂ ಪರಿಶುದ್ಧ ಜೀವನದಲ್ಲಿ ಸಾಧಿಸಿದವರು. ಸಾರ್ವಜನಿಕವನ್ನು ಬಳಸಿಕೊಂಡು ತಮ್ಮದನ್ನು ಬೆಳೆಸಿಕೊಳ್ಳುವ ಸಮಾಜದ ಮಧ್ಯ ನಿಂತು ತಮ್ಮದನ್ನು ಬಳಸಿಕೊಂಡು ಸಾರ್ವಜನಿಕರನ್ನು ಬೆಳೆಸಲು ಶ್ರಮಿಸಲು ಮಹಾ ಜೀವಿ ಇವರು.

ಶ್ರೀ, ಫ, ಗ, ಹಳಕಟ್ಟಿಯವರು 1೯88 ಜುಲೈ 3 ನೆಯ ತಾರೀಖು ಧಾರ ವಾಡದಲ್ಲಿ ಜನಿಸಿದರು. ಇವರ ತಂದೆ ಸಾಹಿತ್ಯ ಪ್ರೇಮಿಗಳೂ, ಆದರ್ಶ ಶಿಕ್ಷಕರೂ ಸುಸಂಸ್ಕೃತ ಧಾರ್ಮಿಕ ವ್ಯಕ್ತಿಗಳೂ ಆಗಿದ್ದ ಗುರುಬಸಪ್ಪನವರು. ತಾಯಿ ಸದ್ಗುಣ ಸಂಪನ್ನೆಯಾದ ದಾನಾದೇವಿ ಮೂರು ವರ್ಷದ ಮಗುವಾಗಿದ್ದಾಗಲೇ ತಾಯಿಯನ್ನು ಕಳೆದುಕೊಂಡು ಫಕೀರಪ್ಪ ಹಳಕಟ್ಟಿಯವರು ತಂದೆಯ ಪೋಷಣೆ ಹಾಗೂ ಮಾರ್ಗ-ದರ್ಶನದಲ್ಲಿಯೇ ಮೈದೆಳೆದರು. ಮೆಟ್ರಿಕ್ ಪರೀಕ್ಷೆಯವರಗೆ ಧಾರವಾಡದಲ್ಲಿಯೇ ಓದಿ ಮುಂಬಯಿಯಲ್ಲಿ ಸೈನ್ಸ್ ಪದವಿಯನ್ನು ಪಡೆದರು. ಮುಂದೆ ಕಾಯಿದೆ ಪರೀಕ್ಷೆ ಯನ್ನು ಮುಗಿಸಿ ಎಂ.ಎ ಪರೀಕ್ಷೆಗೂ ಅಭ್ಯಾಸ ಮಾಡಿದರೂ ಪರೀಕ್ಷೆಗೆ ಕುಳಿತು ಕೊಳ್ಳಲಿಲ್ಲ, ಆಗಿನ ಕಾಲದಲ್ಲಿ ಶಿಕ್ಷಣ ಈಗಿನಷ್ಟು ಜನಜನಿತವಾಗಿರಲಿಲ್ಲ. ಕೇವಲ

ಕೆಲವು ಪದವೀ ಧರರಿದ್ದರು. ಇಂಗ್ಲೀಷಿನಲ್ಲಿ ಪರೀಕ್ಷೆ ಪಾಸು ಮಾಡಿ, ಇಂಗ್ಲೀಷರಿಗೆ ವಿಧೇಯತೆಯಿಂದ ಸೇವೆ ಮಾಡ ಬೇಕಾದಂತಹ ಉನ್ನತ ಪದವಿ ಪಡೆಯುತ್ತಿದ್ದ ಕಾಲವದು, ಅಂತಹ ಸನ್ನಿವೇಶದಲ್ಲಿ ಎರಡು ಪದವಿಗಳನ್ನು ಪಡೆದ ಅವರು, ಮನಸ್ಸು ಮಾಡಿದ್ದರೆ, ಬಹು ದೊಡ್ಡ ಹುದ್ದೆಯನ್ನು ಸರ್ಕಾರದಲ್ಲಿ ಪಡೆಯಬಹುದಿತ್ತು. ಆದರೆ ಸ್ವತಂತ್ರವಾಗಿ ಕೆಲಸ ಮಾಡಿ ಪರದೇಶದವರೂ ಮೆಚ್ಚಿ ತಾವೇ 'ರಾವ್ ಬಹದ್ದೂರ್', 'ರಾವ್ ಸಾಹೇಬ್' ಎಂಬ ಪ್ರಶಸ್ತಿಗಳನ್ನಿತ್ತು ಗೌರವಿಸುವಂತೆ ಬದುಕಿದರು. ಇವರು ವಕೀಲ ವೃತ್ತಿಯನ್ನು ಬೆಳಗಾಂವಿಯಲ್ಲಿ ಪ್ರಾರಂಭಿಸಿದರೂ ಅಲ್ಲಿ ಬಹಳ ಕಾಲ ನಿಲ್ಲದೆ ಬಿಜಾಪುರಕ್ಕೆ ಬಂದು ನೆಲೆಸಿ ಅದನ್ನೇ ತಮ್ಮ ಕಾರ್ಯ ಕ್ಷೇತ್ರವನ್ನಾಗಿ ಮಾಡಿ ಕೊಂಡರು.

ಅನೇಕ ಸಂಘ ಸಂಸ್ಥೆಗಳು ಸಾಧಿಸುವಷ್ಟು ಕೆಲಸವನ್ನು ಹಳಕಟ್ಟಿಯವರು ಮಾಡಿ ರುವುದನ್ನು ನೋಡಿದರು. ಒಬ್ಬ ದಕ್ಷ ವ್ಯಕ್ತಿ ಪ್ರಾಮಾಣಿಕನಾಗಿ ನಿಷ್ಠೆಯಿಂದ ಸತತ ವಾಗಿ ದುಡಿದರು. ಏನೆಲ್ಲಾ ಸಾಧಿಸಲು ಸಾಧ್ಯ ಎಂಬುದಕ್ಕೆ ಇವರೊಂದು ಕಣ್ಮುಂದಿನ ನಿದರ್ಶನ. ಅವರ ಪರಿಶುದ್ಧ ಕಾಯಕ ನಿಷ್ಠ ವ್ಯಕ್ತಿತ್ವ ಅನುಕರಣೀಯ, ಸಮಾಜಕ್ಕೆ ಮಾರ್ಗದರ್ಶಕ. ಹಳಕಟ್ಟಿಯವರು ಮಾನವ ಜೀವಿಸಿದ ಎಲ್ಲ ಕ್ಷೇತ್ರದಲ್ಲೂ ಕೆಲಸ ಮಾಡಿದ್ದಾರೆ. ರಾಜಕೀಯ ಶೈಕ್ಷಣಿಕ, ಧಾರ್ಮಿಕ ಸಾಹಿತ್ಯಕ ಸಾಮಾಜಿಕ ಎಲ್ಲ ಕ್ಷೇತ್ರಗಳಲ್ಲೂ ದುಡಿದಿದ್ದಾರೆ.

ರಾಜಕೀಯ ಕ್ಷೇತ್ರಗಳಲ್ಲಿ ಕಾಲಿರಿಸಿ ರಾಷ್ಟ್ರದ ಸ್ವಾತಂತ್ರ ಗಳಿಸುವ ಸೇವೆಯ ಲ್ಲಿ ಪಾಲ್ಗೊಂಡಿದ್ದಾರೆ. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಕಾರ್ಯದರ್ಶಿಯಾಗಿ ವಿಧಾನಪರಿಷತ್ತಿನ ಚುನಾಯಿತ ಸದಸ್ಯರಾಗಿ ರಾಜಕೀಯ ಕ್ಷೇತ್ರದಲ್ಲಿ ದುಡಿದಿದ್ದಾರೆ,

**ವಚನ ಸಾಹಿತ್ಯದ ಅವಿಷ್ಕಾರಿ**

ಸಾಹಿತ್ಯ ಕ್ಷೇತ್ರದಲ್ಲಿ ಇವರು ಸಲ್ಲಿಸಿರುವ ಸೇವೆ ಅಪಾರ. ಗುಬ್ಬಿಯ ಮಲ್ಲಣಾರ್ಯ ಮಾಡಿದ ಗಣಭಾಷ್ಯ ರತ್ನ ಮಾಲೆಯ ಕೈ ಬರಹದ ಕೃತಿ ಅವರ ದೃಷ್ಟಿಗೆ ಬಿದ್ದು ಅವರ ಜೀವನದ ಜಾಡನ್ನೇ ಬದಲಿಸಿತು. ಅವರಲ್ಲಿಯ ಸುಂದರ ವಚನಗಳು ಅವರ ಮನಸ್ಸನ್ನು ಸೂರೆಗೊಂಡವು. ಅಲ್ಲಿಂದ ಅವರು ವಚನ ವಾಙ್ಮ ಯದ ಶೋಧನೆಗೆ ಹೊರಟರು. ಮನೆ ಮನೆಗಳನ್ನು. ಮಠ-ಮಠಗಳನ್ನು ಸುತ್ತ ಗೆದ್ದಲು ತಿಂದು ನಾಶವಾಗಿ ಹೋಗುತ್ತಿದ್ದಂತಹ ಅಮೂಲ್ಯ ವಚನ ಸಾಹಿತ್ಯದ ತಾಡೋಲೆ ಗ್ರಂಥಗಳನ್ನು ಸಂಗ್ರಹಿಸಿದರು. ಅವರ ಅವಿಶ್ರಾಂತ ಶ್ರಮ, ಕುಂದದ ಆಸಕ್ತಿಯ ಫಲವಾಗಿ ಸುಮಾರು ಒಂದುಸಾವಿರ ಕೃತಿಗಳ ಸಂಗ್ರಹವಾಯ್ತು. ಆ ಅಮೂಲ್ಯ ಸರಳ, ಸುಂದರ, ಜನಸಾಮಾನ್ಯರ ಕೈ ದೀವಿಗೆಯಾಗಬಹುದಾದ ವಚನ ಸಾಹಿ-

ತ್ಯದ ಲಾಭ ಜನತೆಗೆ ದೊರೆಯಬೇಕಾದರೆ ಅವರ ಮಹತ್ತು, ಲಾಭ ಶ್ರೇಷ್ಠತೆಯ ಅರಿವಾಗುವಂತೆ ಮಾಡುವುದು ಅವಶ್ಯಕವೆಂದು ಅರಿತರು. ಅದಕ್ಕಾಗಿ ಒಂದು ಪ್ರದರ್ಶನವ ಏರ್ಪಡಿಸಿ ಅಂದಿನ ಕಲೆಕ್ಟರ್‌ರಿಂದ ಉದ್ಘಾಟಿಸಿದರು. ಆ ಸಂಗ್ರಹದಲ್ಲಿದ್ದ ರಗಳೆ ಷಟ್ಪದಿ, ಸಾಹಿತ್ಯ ತ್ರಿಪದಿ, ಹಾಡು ಮೊದಲಾದವುಗಳನ್ನು ಬೇರೆ ಬೇರೆ ಗುಂಪುಗಳನ್ನಾಗಿ ವಿಂಗಡಿಸಿ ಸ್ವಂತ ಖರ್ಚಿನಲ್ಲಿ ಕಾರಕೂನರನ್ನು ನೇಮಿಸಿಕೊಂಡು ಅವುಗಳ ನಕಲನ್ನು ಸಿದ್ಧಪಡಿಸಿದರು. ಆಗಿನ ಕಾಲದಲ್ಲಿ ಅಚ್ಚು ಹಾಕಿ ಪುಸ್ತಕ ಪ್ರಕಟಣೆ ಮಾಡುವುದು ಸುಲಭಸಾಧ್ಯವಾಗಿರಲಿಲ್ಲ. ಅದಕ್ಕಾಗಿ ಅವರು ಪಟ್ಟಶ್ರಮ ಸಾರ್ಥಕವಾಗಲಿಲ್ಲವಾಗಿ ತಮ್ಮ ಸ್ವಂತಮನೆಯನ್ನು ಮಾರಿ 'ಹಿತಚಿಂತಕ' ಎಂಬ ಅಚ್ಚುಕೂಟವನ್ನು ಪಾರಂಭಿಸಿದರು. ಉತ್ತಮ ವಚನ ಆರಿಸಿ ವಿಷಯಕ್ಕನುಗುಣವಾಗಿ ಹೊಂದಿಸಿ ಪ್ರಕಟಿಸಿದರು. ಸುಮಾರು 60 ವರ್ಷಗಳಕಾಲ ಸತತ ಸಾಹಿತ್ಯಸೇವೆ ಸಲ್ಲಿಸಿ ಕನ್ನಡ ನಾಡಿಗೆ, ಕನ್ನಡ ಜನರಿಗೆ ಕನ್ನಡ ಭಾಷೆಗೆ ಅತ್ಯಮೂಲ್ಯ ಕಾಣಿಕೆಯನ್ನು ಅರ್ಪಿಸಿದ್ದಾರೆ. ಈ ಕೆಲಸ ಮಾಡುವಲ್ಲಿ ಅಡ್ಡಿಯಾಗುತ್ತಿದ್ದ ರಾಜಕೀಯದಿಂದ ದೂರಾದರು. ತಮ್ಮ ಉದ್ಯೋಗದಲ್ಲಿ ಆಸಕ್ತಿಯನ್ನು ಬಿಟ್ಟರು. ಪಬ್ಲಿಕ್ ಪ್ರಾಸಿಕ್ಯೂಟರ್ ನೇಮಿಸಲ್ಪಟ್ಟ ಇವರು ಆ ಬಗೆಗೆ ಆಸಕ್ತಿ ವಹಿಸಿದ್ದರೆ ನೌಕರಿಯಲ್ಲಿ ಬೇಕಾದಂತಹ ಎತ್ತರಕ್ಕೆ ಏರಬಹುದಿತ್ತು. ಆದರೆ ಅವರ ಸಾಹಿತ್ಯ, ಪ್ರೇಮ, ಸಾಮಾಜಿಕನಿಷ್ಠೆ, ಧಾರ್ಮಿಕಶ್ರದ್ಧೆ ಪ್ರಾಮಾಣಿಕ ಕರ್ತವ್ಯಗಳು ಅವರನ್ನು ವೈಯಕ್ತಿಕ ಪ್ರಗತಿಗಳ ಬಗೆಗೆ ಮಿಡಿಯಲು ಬಿಡಲಿಲ್ಲ. ಧರ್ಮಾಂಧತೆ ಇಲ್ಲದ ವಿಶ್ವಧರ್ಮವಾದ ವೀರಶೈವ ಶರಣರ ತತ್ವಗಳು ಇವರ ಮನಸ್ಸನ್ನು ಸೆರೆಹಿಡಿದು. ಮಾನವೀಯ ಉದ್ಧಾರಕ್ಕಾಗಿ ಶರಣಸಾಹಿತ್ಯ ಸೇವೆ ಮಾಡಲು ಇವರನ್ನು ಪ್ರೇರೇಪಿಸಿದವು. ಕ್ರಮೇಣವಾಗಿ ವಕೀಲ ವೃತ್ತಿಯನ್ನು ತ್ಯಜಿಸಿದರು. ಜನರಲ್ಲಿ ಕನ್ನಡದ ಬಗ್ಗೆ ಅಭಿಮಾನ ಹುಟ್ಟಿಸಲು ಕನ್ನಡವನ್ನು ಪ್ರೋತ್ಸಾಹಿಸಲು ಕನ್ನಡ ಭಾಷೆಯನ್ನು ಬೆಳೆಸಲು ನವಕರ್ನಾಟಕವೆಂಬ ಪತ್ರಿಕೆಯನ್ನು ಹೊರಡಿಸಿದರು. ಜನರಲ್ಲಿ ಧಾರ್ಮಿಕ ಭಾವನೆ ಜಾಗೃತಗೊಳಿಸಲು ನಿಜವಾದ ಧರ್ಮವೇನೆಂಬುದರ ಪರಿಚಯ ಮಾಡಿಕೊಡಲು ವಚನಗಳ ಮಹತ್ತರ ಅರಿವನ್ನುಂಟುಮಾಡಲು ಶಿವಾನುಭವ ಮಾಸಿಕವನ್ನು ಪ್ರಾರಂಭಿಸಿದರು. ಸುಮಾರು 77 ಕೃತಿಗಳನ್ನು ಸ್ವತಃ ಪ್ರಕಟಿಸಿದರು. ಬರೀ ಆದರ್ಶಗಳಿದ್ದು ವ್ಯವಹಾರಕ್ಕೆ ಜೀವನದ ಅರಿವಿಲ್ಲದಿದ್ದರೆ ಮನುಷ್ಯನ ಜೀವನ ದುಃಖಮಯವಾಗುವುದೆಂದು ಅರಿತು ಸಮಾಜದ ಜನರೆಲ್ಲಾ ಸುಖದಿಂದ ಬದುಕಬೇಕೆಂಬ ಮಾನವೀಯ ಗುಣಪಡೆದ ಇವರು ನೈತಿಕ, ಬೌದ್ಧಿಕ ವ್ಯವಹಾರಿಕ ಪ್ರಗತಿಗೆ ಸಹಾಯಕವಾಗುವ ವಿಚಾರಗಳನ್ನು ಘೋಷಿಸಿ ಯುವಕ ಪೀಳಿಗೆಗೆ "ಪ್ರಗತಿ ಮಾರ್ಗ ಜೀವನ" ಎಂಬ ಪುಸ್ತಕ ಬರೆದು ಪ್ರಕಟಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನೊಡನೆ ನಿಕಟ ಸಂಪರ್ಕ ಇಟ್ಟುಕೊಂಡು ಪ್ರತಿಸಲವೂ ಸಾಹಿತ್ಯ ಸಮ್ಮೇಳನದಲ್ಲಿ

ವಿಚಾರಪೂರ್ಣವಾದ ಉಪನ್ಯಾಸಗಳನ್ನು ಕೊಡುತ್ತಿದ್ದರು. ಒಮ್ಮೆ ವಚನ ಸಾಹಿತ್ಯದ ಮೇಲೆ ಇವರು ಮಾಡಿದ ಭಾಷಣದಿಂದ ಜನ ಬೆರಗಾದರು. ಇವರ ಸಾಹಿತ್ಯ ಪ್ರೇಮ ಪಾಂಡಿತ್ಯ, ಸೇವೆಯನ್ನು ಅವಲೋಕಿಸಿದ ಪರಿಷತ್ತು ಬಳ್ಳಾರಿಯಲ್ಲಿ ನಡೆದ ಕನ್ನಡ-ಸಾಹಿತ್ಯ ಸಮ್ಮೇಳನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಆರಿಸಿ ಗೌರವಿಸಿತು. ಕರ್ನಾಟಕ ವಿಶ್ವವಿದ್ಯಾಲಯವೂ ಸಹ ಇವರ ಅಗಾಧ ಸಾಹಿತ್ಯಸೇವೆಯನ್ನು ಡಾಕ್ಟರೇಟ್ ಪ್ರಶಸ್ತಿ ನೀಡುವುದರ ಮೂಲಕ ಕೊಂಡಾಡಿ ಗೌರವಿಸಿತು.

**ಶಿಕ್ಷಣ ಪ್ರೇಮಿ ಶ್ರೀ ಹಳಕಟ್ಟಿ :-**

ಇವರ ಕನ್ನಡ ಪ್ರೇಮ ಶಿಕ್ಷಣದ ಬಗೆಗಿನ ಅಭಿಮಾನ ಅಮಿತವಾದುದು. ಕನ್ನಡದ ಗಂಡು ಮೆಟ್ಟಿದ ಬಿಜಾಪುರದಲ್ಲಿ ಕನ್ನಡ ಶಾಲೆಗಳಿಗಿಂತ ಮರಾಠೀ ಶಾಲೆಗಳೇ ಹೆಚ್ಚಾಗಿದ್ದುದನ್ನು ನೋಡಿ ಅವರ ಸ್ವಾಭಿಮಾನಕ್ಕೆ ಧಕ್ಕೆ ಎನ್ನಿಸಿ ಕನ್ನಡಿಗರ ಬಗ್ಗೆ ಅನುಕಂಪ ಮೂಡಿತು. ಬಿಜಾಪುರದ ನಗರ ಸಭೆಯ ಶಾಲಾ ಮಂಡಲದ ಸದಸ್ಯರುಗಳ ಅವಕಾಶ ಉಪಯೋಗಿಸಿಕೊಂಡು ಬಿಜಾಪುರದಲ್ಲಿ ಕನ್ನಡ ಶಾಲೆಗಳು ತಲೆ ಎತ್ತುವಂತೆ ಮಾಡಿದರು. ಸಿದ್ಧೇಶ್ವರ ಹೈಸ್ಕೂಲನ್ನು ತೆರೆದು ಅದನ್ನು ಅಭಿವೃದ್ಧಿಗೊಳಿಸುವ ಮಾರ್ಗದರ್ಶಿಯಾದ ಒಂದು ಪುಸ್ತಕವನ್ನು ಪ್ರಕಟಿಸಿದರು. ಅದರಲ್ಲಿ ಪಠ್ಯ-ಪಠ್ಯೇತರ ಚಟುವಟಿಕೆಗಳ ವಿವರವನ್ನೆಲ್ಲಾ ಕೊಟ್ಟಿರುವುದನ್ನು ನೋಡಿದರೆ ಇವರು ಒಬ್ಬ ಶಿಕ್ಷಣ ತಜ್ಞರೂ ಆಗಿದ್ದರೆಂಬುದರಲ್ಲಿ ಸಂಶಯವಿಲ್ಲ. ಕರ್ನಾಟಕ ಏಕೀಕರಣ ಪರಿಷತ್ತಿನ ಅಧ್ಯಕ್ಷರಾಗಿ ಕರ್ನಾಟಕ ರಾಜ್ಯದ ಸ್ಥಾಪನೆಗೂ ತಮ್ಮ ಸೇವೆ ಸಲ್ಲಿಸಿದ್ದಾರೆ.

ಇಷ್ಟೇ ಅಲ್ಲದೆ ಸಾರ್ವಜನಿಕರ ವ್ಯವಹಾರಿಕ ಜೀವನಕ್ಕೆ ಅನುಕೂಲವಾಗಲೆಂದು ವಿಜಾಪುರದಲ್ಲಿ ಶ್ರೀ ಸಿದ್ದೇಶ್ವರ ಕೋ- ಆಪರೇಟೀವ್ ಸೊಸೈಟಿಯನ್ನು ಪ್ರಾರಂಭಿಸಿದರು. ರೈತನಿಗೆ ಸಹಾಯವಾಗುವಂತೆ ಒಕ್ಕಲುತನಸಹಕಾರಿ ಸಂಘವನ್ನು ಸ್ಥಾಪಿಸಿದರು. ನೇಕಾರರಿಗೂ, ಹತ್ತಿಯ ಬೆಳೆಗಾರರಿಗೂ ಉಪಕಾರವಾಗಲೆಂದು ಹತ್ತಿಯ ಮಾರಾಟ ಸಂಘಗಳನ್ನು ರಚಿಸಿದರು. ಯುದ್ಧಸಮಿತಿಯ ಕಾರ್ಯದರ್ಶಿಯಾಗಿ ಆ ಕ್ಷೇತ್ರದ ಸೇವೆ ಸಲ್ಲಿಸಿದ ಸರ್ವಾಂತರ್ಯಾಮಿ ಇವರು. ಗ್ರಾಮೀಣದ ಅಭಿವೃದ್ಧಿ ಮಂಡಲದ ಕಾರ್ಯದರ್ಶಿಯಾಗಿ ಹಳ್ಳಿಗರ ಉದ್ಧಾರಕ್ಕೆ ಶ್ರಮಿಸಿದ್ದಾರೆ. ಆ್ಯಂಟಿ ಫ್ಯಾಮಿನ್ ಇನ್‌ಸ್ಟಿಟ್ಯೂಟ್‌ನ ಕಾರ್ಯದರ್ಶಿಯಾಗಿ ಭೂಮಿಯ ಅಭಿವೃದ್ಧಿ ಕಾರ್ಯ ಕೈಗೊಂಡು ವ್ಯವಸಾಯದ ಉತ್ಪನ್ನಗಳ ಹೆಚ್ಚುವರಿಗೆ ಸಹಾಯಕರಾದರು. ಹೀಗೆ ಇವರು ಸಲ್ಲಿಸಿದ ಸೇವೆ ಒಂದೆ ಎರಡೆ? ಇವರ ಕೆಲಸ ಗಮನಿಸಿದರೆ ಇವರು ಭೂಮಿಗಿಳಿದು ಬಂದ ಸರ್ವಶಕ್ತನೆ ಎಂಬ ಶಂಕೆ ಮೂಡುತ್ತದೆ.

ಈ ಎಲ್ಲ ಕಾರ್ಯಗಳ ಮೂಲಕ ಅವರು ಜನರಲ್ಲಿ ಒಂದಾದರು. ಅವರುಗಳ ಮನದಲ್ಲಿ ಬೆರೆತರು. ಎಲ್ಲರ ಅಚ್ಚು ಮೆಚ್ಚಿನ ಅಣ್ಣನವರಾದರು, ನಾವು ಯಾರು ಯಾರನ್ನೋ ಬಸವಣ್ಣನವರಿಗೆ ಹೋಲಿಸಿ ಬಸವಣ್ಣನವರು ಸಣ್ಣವರನ್ನಾಗಿ ಮಾಡುತ್ತಿರುತ್ತೇವೆ. ಆದರೆ ಫಕೀರಪ್ಪ ಹಳಕಟ್ಟಿಯವರನ್ನು ಇಪ್ಪತ್ತನೆಯ ಶತಮಾನದ ಬಸವಣ್ಣ ಎಂದರೆ ಯಾವ ರೀತಿಯ ಅಪಚಾರವೂ ಆಗದೆ ಸೂಕ್ತವಾದ ಹೋಲಿಕೆ ಎನ್ನಿಸಬಹುದು. ಬಸವಣ್ಣನವರು ಕಲ್ಯಾಣದ ಕ್ರಾಂತಿಗೆ ಕಾರಣರಾದರೆ ಫಕೀರಣ್ಣನವರು ಬಿಜಾಪುರ ಭಾಗದ ಜನಜೀವನದಲ್ಲಿ ತಮ್ಮ ಸರ್ವತೋಮುಖವಾದ ಕೃತಿಗಳಿಂದ ಕ್ರಾಂತಿ ಮಾಡಿದ್ದಾರೆ.

ಇವರ ಧರ್ಮ ಶ್ರದ್ಧೆ ಅಪಾರವಾದುದು ನಿಜವಾದ-ವೀರಶೈವ ಧರ್ಮದ ವ್ಯಕ್ತಿ ಹೇಗಿರಬೇಕೋ ಹಾಗೆ ಬಾಳಿದವರು. ಸ್ವಧರ್ಮಾಭಿಮಾನಿ, ಪರಧರ್ಮ ಪ್ರೇಮಿ. ಇವರ ಧಾರ್ಮಿಕ ಶ್ರದ್ಧೆ ಕಾರ್ಯಗಳನ್ನು ಗೌರವಿಸಿ, ಜನತೆ ಅವರನ್ನು 1933 ರಲ್ಲಿ ಧಾರವಾಡದಲ್ಲಿ ನಡೆದ ಅಖಿಲ ಭಾರತ ವೀರಶೈವ ಮಹಾಸಭೆಯ ಅಧ್ಯಕ್ಷರನ್ನಾಗಿ ನೇಮಿಸಿ, ನಮಿಸಿತು. ಹೀಗೆ ಜೀವನದ ಸರ್ವ ಕ್ಷೇತ್ರದಲ್ಲೂ ಸೇವೆ ಸಲ್ಲಿಸಿ, ಜನಮನವನ್ನು ಗೆದ್ದು ಜನತೆಯ ಗೌರವಕ್ಕೆ ಸತ್ಪಾತ್ರರಾದ ಹಳಕಟ್ಟಿಯವರು 1964 ನೆಯ ಜೂನ್ 29 ರಂದು ಇಹಲೋಕಕ್ಕೆ ಯಾತ್ರೆ ಮುಗಿಸಿ ಲಿಂಗದಲ್ಲಿ ಒಂದಾದರು.

ಶರಣ ಫ, ಗು, ಹಳಕಟ್ಟಿಯವರ ದಿವ್ಯಾತ್ಮ ದೇಹ ಬಿಟ್ಟು ಜ್ಯೋತಿಯ ರೂಪತಾಳಿದೆ. ಯಾವ ಮಾನವ ಬೇಕಾದರೂ ಈ ಜ್ಯೋತಿಯ ಬೆಳಕಿನಲ್ಲಿ ತನ್ನ ಜೀವನ ಮಾರ್ಗದ ಕತ್ತಲೆಯನ್ನು ಕಳೆದುಕೊಂಡು ಬೆಳಕಿನ ಮಾರ್ಗದಲ್ಲಿ ಸಾಗಬಹುದಾಗಿದೆ. ಈ ಜ್ಯೋತಿ ಸರ್ವರಿಗೂ ಬೆಳಕನ್ನು ನೀಡಬಲ್ಲ ಪ್ರಕಾಶ ಮಯವಾದ ಅಮರ ಜ್ಯೋತಿ ಎಂದಿಗೂ 'ನಂದದ ನಂದಾದೀಪ.

---

ಶಾಸ್ತ್ರ ಘನವೆಂಬೆನೆ ? ಕರ್ಮವ ಭಜಿಸುತ್ತಿದೆ !
ವೇದ ಘನವೆಂಬೆನೆ ? ಪ್ರಾಣವಧೆಯ ಹೇಳುತ್ತಿದೆ !
ಸ್ಮೃತಿ ಘನವೆಂಬೆನೆ ? ಮುಂದಿಟ್ಟು ಅರಸುತ್ತಿದೆ !
ಅಲ್ಲೆಲ್ಲಿಯೂ ನೀವಿಲ್ಲದ ಕಾರಣ, ತ್ರಿವಿಧದಾಸೋಹದಲ್ಲಲ್ಲದೆ
ಕಾಣಬಾರದು ಕೂಡಲಸಂಗಮದೇವನ !

—ಭಗವಾನ್ ಬಸವಣ್ಣ

# ಬೆರಳುಗಳ ಅಚ್ಚು ಕೊಟ್ಟ ' ಟೈಪ್ ರೈಟರ್ '

ಪ. ರಾಮಕೃಷ್ಣ ಶಾಸ್ತ್ರಿಗಳು, "ಶಿವಶಕ್ತಿ ನಿಲಯ" ಅಂಚೆ : ಮಜ್ಜಿನ - 574 295 (ದ. ಕ.)

ಸಾವಿರಾರು ವರುಷಗಳಿಂದ ಬಾತುಕೋಳಿಯ ಗರಿಯನ್ನು ಮಸಿಯಲ್ಲಿ ಅದ್ದಿ ಬರೆಯುವ ವಿಧಾನ ಬಳಕೆಯಲ್ಲಿತ್ತು. ಅದನ್ನು ನಿವಾರಿಸಿ ಕೈಯಿಂದ ಬಡಿಯುತ್ತಲೇ ಕಾಗದದ ಮೇಲೆ ಅಕ್ಷರ ಮೂಡಿಸುವ ಯೋಜನೆಯನ್ನು ಮನುಷ್ಯ ಆವಿಷ್ಕಾರಗೊಳಿಸಿದ. ಹೀಗೆ ಬಡಿದಾಗ ಅಕ್ಷರ ಮೂಡಿಸುವ ಯಂತ್ರವನ್ನು ನಾವಿಂದು ಟೈಪ್‌ರೈಟರೆಂದು ಕರೆ-ಯುತ್ತಿದ್ದೇವೆ. ಎರಡು ಶತಮಾನಗಳಿಗೂ ಹಿಂದೆ ಹೆನ್ರಿಮಿಲ್ ಎಂಬಾತ ಮೊದಲ ಬಾರಿಗೆ ಇಂತಹ ಯಂತ್ರವನ್ನು ತಯಾರಿಸಿದ. ಆದರೆ ಇದಕ್ಕೆ ಯಾರ ಪ್ರೋತ್ಸಾಹವೂ ಸಿಗದೆ ಅದರ ಸುಧಾರಣೆ ಸಾಧ್ಯವಾಗಲಿಲ್ಲ. ಸಾಮಾನ್ಯವಾಗಿ ಇಂದಿನ ಟೈಪ್‌ರೈಟರಿನಂತಿರುವ ಯಂತ್ರವನ್ನು ಫ್ರಾನ್ಸಿನ ಪ್ರೋಗ್ರಿನ್ ೧೮೩೩ ರಲ್ಲಿ ಶೋಧಿಸಿದ್ದರೂ ಅದು ಜನಪ್ರಿಯವಾಗಲಿಲ್ಲ. ಆಂಗ್ಲರು, ಅಮೇರಿಕನ್ನರು, ಫ್ರೆಂಚರು ಇಂತಹದೇ ಯಂತ್ರಗಳನ್ನು ತಯಾರಿಸಿದ್ದರು.

ಆದರೆ ಸರಿಯಾದ ಟೈಪ್‌ರೈಟರ್ ಯಂತ್ರ ಶೋಧಿಸಿದ ಕೀರ್ತಿ ಅಮೇರಿಕದ ಮಿಲ್ವಾಕಿಯ ಕ್ರಿಸ್ಟೋಫರ್ ಶೋಲ್ಸ್ ಎಂಬ ಮುದ್ರಕನಿಗೆ ಸಲ್ಲುತ್ತದೆ. ಆತ ತನ್ನ ಊರಿನವರೇ ಆದ ಸ್ಯಾಮುಯಲ್ ಸೋಲೆ ಎಂಬ ಮುದ್ರಕ ಮತ್ತು ಕಾರ್ಲೋಸ್ ಗ್ಲಿಡನ್ ಎಂಬ ಯಂತ್ರ ರಿಪೇರಿಯವನೊಂದಿಗೆ ೧೮೬೭ ರಲ್ಲಿ ಯಂತ್ರವೊಂದನ್ನು ತಯಾರಿಸಿದ. ಈ ಯಂತ್ರ ದೋಷ ಪೂರ್ಣವಾಗಿದ್ದುದರಿಂದ ೩೦ ಸಲ ಅದರ ಮಾದರಿಗಳನ್ನು ಬದ-ಲಾಯಿಸಬೇಕಾಗಿ ಬಂದುದರಿಂದ ನಿರಾಶರಾಗಿ ಇಬ್ಬರೂ ಜಾರಿಕೊಂಡರು. ಉಳಿದವ ಕ್ರಿಸ್ಟೋಫರ್ ಮಾತ್ರ. ಅವನು ೧೮೭೩ ರಲ್ಲಿ ಇಂತಹ ಯಂತ್ರವೊಂದನ್ನು ಜಗತ್ತಿಗೆ ನೀಡುವಲ್ಲಿ ಸಾಫಲ್ಯ ಗಳಿಸಿದ.

ಆದರೆ ಯಂತ್ರವನ್ನು ತಯಾರಿಸಲು ಶೋಲ್ಸನಲ್ಲಿ ಹಣವಿರಲಿಲ್ಲ. ೧೮೭೪ ರಲ್ಲಿ ನ್ಯೂಯಾರ್ಕಿನ ಇ ರೆಮಿಂಗ್ಟನ್ ಎಂಡ್ ಸನ್ಸ್ ಎಂಬ ಬಂದೂಕು ತಯಾರಿಕಾ ಸಂಸ್ಥೆಯು ಆವನ ಯಂತ್ರದ ಉತ್ಪನ್ನ ಮತ್ತು ಮಾರಾಟದ ಹೊಣೆ ವಹಿಸಿ ಕೊಂಡಿತು. ಅತನ ಯಂತ್ರದ ಹಲವು ನ್ಯೂನತೆಗಳನ್ನು ನಿವಾರಿಸಿ "ರೆಮಿಂಗ್ಟನ್ ನಂ. ೧" ಎಂಬ ಯಂತ್ರವನ್ನು ಮಾರುಕಟ್ಟೆಗೆ ಬಿಡುಗಡೆಗೊಳಿಸಿತು. ಆಗ ಅದರ ಬೆಲೆ ೫೦೦ ರೂಗಳಾಗಿತ್ತು. ಆರಂಭದಲ್ಲಿ ಯಂತ್ರಕ್ಕೆ ಜನಪ್ರಿಯತೆ ಸಿಗಲಿಲ್ಲ ೭ ವರ್ಷಗಳಲ್ಲಿ ಕೇವಲ ೧೨೦೦ ಯಂತ್ರಗಳು ಮಾತ್ರ ಮಾರಾಟವಾದವು. ಅಗ್ಗವಾಗಿ ಲೇಖನಿಗಳು ಸಿಗುವಾಗ ಇಂಥದಕ್ಕೆ ಹಣ ಸುರಿಯುವುದು ಹುಚ್ಚುತನವೆಂದೇ ಸಂಸ್ಥೆಗಳು ಪರಿಗಣಿಸಿದವು. ಕಛೇರಿಗಳಲ್ಲಿ ನೌಕರರು ಅದರಿಂದಾಗಿ ತಮ್ಮ ನೌಕ

ರಿಗೆ ಸಂಚಕಾರ ಬರುವುದೆಂದು ಭಾವಿಸಿ ಕಛೇರಿಗೆ ಅದನ್ನು ಹೋಗಿಸಿದರೆ ತಾವು ಒಳಗೆ ಬಾರದೆ ಸಂಪು ಹೂಡುವ ಬೆದರಿಕೆಯನ್ನೊಡ್ಡಿದರು. ಅಗ ಎಲ್ಲೆಡೆಯೂ ಯೂ ಸುಂದರವಾದ ಬರವಣಿಗೆಯುಳ್ಳವರಿಗೆ ಚೆನ್ನಾಗಿ ಬೇಡಿಕೆ ಇತ್ತು. ಶಬ್ದದ ವೇಗ ನಿಮಿಷಕ್ಕೆ ೨೦ ಇದ್ದಿತಾದರೂ ಅಂಥವರಿಗೆ ಅದು ಜೀವನ ಸಾಗಿಸುವ ಉಪಾಯವಾಗಿತ್ತು.

ನ್ಯೂಯಾರ್ಕಿನ ಕ್ರೈಸ್ತ ಯುವತಿಯರ ಸಂಘವು ಮೊದಲ ಬಾರಿಗೆ ವಾಣಿಜ್ಯ ರಂಗದಲ್ಲಿ ಮಹಿಳೆಯರನ್ನು ಪ್ರವೇಶಗೊಳಿಸಿ ೧೮೮೦ ರಲ್ಲಿ ಕಛೇರಿ ಉದ್ಯೋಗದಲ್ಲಿ ತರಬೇತಿ ನೀಡತೊಡಗಿತು. ಆದೇತಾನೆ ಐಸಾಕ್ ಪಿಟ್‌ಮನ್ ಶೀಘ್ರಲಿಪಿಯನ್ನು ಶೋಧಿಸಿದ್ದ. ಅದನ್ನು ಟೈಪ್‌ರೈಟರ್‌ನಲ್ಲಿ ಮೂಡಿಸುವ ಶಿಕ್ಷಣವನ್ನು ನೀಡುತ್ತಿದ್ದ. ಆದರೆ ದೃಢಕಾಯರಲ್ಲದ ತರುಣಿಯರಿಗೆ ಈ ಯಂತ್ರವನ್ನು ನಡೆಸಲು ಸಾಧ್ಯವಿರಲಿಲ್ಲ. ಅಂತೂ ೬ ತಿಂಗಳ ತರಬೇತಿಯಲ್ಲಿ ೮ ಮಂದಿ ದೃಢಕಾಯ ಯುವತಿಯರು ಪರಿಣತರಾದರು.

ಆಗ ಸಂಸ್ಥೆಗಳು ಟೈಪ್‌ರೈಟರಿನ ಉಪಯೋಗವನ್ನರಿತು ಅವರಿಗೆ ಮಾಸಿಕ ೩೦ ಡಾಲರ್ ವೇತನದ ನೌಕರಿ ನೀಡಿದವು. ಈ ಸಂಬಳ ತರುಣಿಗಳಲ್ಲಿ ಸಿಗುವುದರ ದುಪ್ಪಟ್ಟಾಗಿತ್ತು. ಇಂದಿಗೂ ಟೈಪ್‌ರೈಟರ್ ಕ್ಷೇತ್ರದಲ್ಲಿ ಗಂಡಸರಿಗಿಂತ ಹೆಂಗಸರದೇ ಮೇಲುಗೈ. ನಿಮಿಷಕ್ಕೆ ೪೦ ರಿಂದ ನೂರರ ತನಕ ಶಬ್ದ ಮೂಡಿಸಬಲ್ಲರು. ಅಮೇರಿಕದಲ್ಲಿ ಅವರಿಗೆ ೬ ಸಾವಿರ ರೂ ಸಂಬಳವಿದೆ.

ಈ ಶತಮಾನದ ಬೆಳಕು ಹರಿದಾಗ ಜಗತ್ತಿನ ಎಲ್ಲೆಡೆ ೭ ಲಕ್ಷ ಈ ಯಂತ್ರಗಳು ಕಾಲಿರಿಸಿದ್ದವು. ದಕ್ಷಿಣ ಧ್ರುವಕ್ಕೆ ಸಂಶೋಧನೆಗೆ ತೆರಳಿದ ಅಮೇರಿಕದ ಹಡಗೊಂದರಲ್ಲಿ ಅದು ಅಲ್ಲಿಗೂ ಕಾಲಿರಿಸಿತು ದಕ್ಷಿಣ ಆಫ್ರಿಕದವರಿಗೂ ಇದು ಪ್ರಿಯವಾಯಿತು. ಮುಂದೆ ಮನೆ ಮನೆಯಲ್ಲೂ ಅದರ ಪ್ರಸಾರವಾಯಿತು. ಹಾಸ್ಯ ಸಾಹಿತಿ ಮಾರ್ಕ್ ಟ್ವೇನ್ ತನ್ನ ಕೆಲವು ಕೃತಿಗಳನ್ನು ಇದರಲ್ಲೇ ಮೂಡಿಸಿದ. ಆಗೆಲ್ಲ ಯಂತ್ರ ತಯಾರಕರು ಯಂತ್ರದೊಂದಿಗೇ ಅದನ್ನು ನಡೆಸುವವರನ್ನೂ ಒದಗಿಸ ಬೇಕಾಗಿತ್ತು. ಅವರಿಗೆ ತರಬೇತಿ ನೀಡಿ ಉದ್ಯೋಗವೀಯುವ ಭರವಸೆಯನ್ನೂ ಕೊಡಬೇಕಾಗಿತ್ತು. ಆರಂಭದ ಟೈಪ್‌ರೈಟರಿಗೆ ಈಗಿನ ವೇಗವಿರಲಿಲ್ಲ. ಎರಡೇ ಬೆರಳುಗಳಲ್ಲಿ ನಡೆಸುತ್ತಿದರು. ಟೇಬ್ಯುಲೇಟರ್ ಇರಲಿಲ್ಲ, ಆಂಗ್ಲ ವರ್ಣಮಾಲೆಯ ದೊಡ್ಡ ಅಕ್ಷರಗಳು ಮಾತ್ರ ಅದರಲ್ಲಿದ್ದುವು.

ಅಮೇರಿಕದಗ್ರ್ಯಾಂಡ್ ರ್‍ಯಾಪಿಡ್ಸ್ ಎಂಬಾತ ಪಿಯಾನೋ ವಾದಕರು ಪಿಯಾನೋವನ್ನು ನೋಡದೆ ನೆನಪಿನ ಬಲದಿಂದ ನುಡಿಸುವುದನ್ನು ನೋಡಿದ. ನೆನಪಿನ ಬಲದಿಂದಲೇ ಟೈಪ್‌ರೈಟರನ್ನೂ ಯಾಕೆ ನಡೆಸಬಾರದು? ಎಂದು ಆತ ಯೋಚಿಸಿ

ವರಲ್ಲಿ ಸಫಲತೆ ಗಳಿಸಿದ ಇಂದಿನ ಅತಿಶಯ ವೇಗದ ಟಚ್ ಸಿಸ್ಟಂ ಅಥವಾ ಸ್ಪರ್ಶ ದ್ಧತಿಯ ಶೋಧಕ ಆತ ನಿಮಿಷಕ್ಕೆ ೧೦ ಶಬ್ದಗಳ ಆತ ಮೂಡಿಸಿದರೆ. ರೆಮಿಂಗ್ಟನ್ ಪೆನಿ ಅವನನ್ನು ನೌಕರಿಗೆ ನೇಮಿಸಿಕೊಂಡು ಎಲ್ಲೆಡೆ ಈ ಪದ್ಧತಿಯ ಪ್ರಚಾರ ಾಡಿಸಿತು. ೧೯೩೫ ರಲ್ಲಿ ವಿದ್ಯುತ್ತಿನಿಂದ ಚಲಿಸುವ ವೇಗದ ಯಂತ್ರಗಳು ಬಂದು ಧಕಾಯರೇ ಅದನ್ನು ನಡೆಸಬೇಕೆಂಬ ಪದ್ಧತಿ ಮಾಯವಾಯಿತು. ಶೋಲ್ಸ್ ಯಾರಿಸಿದ ಯಂತ್ರದ ವ್ಯವಸ್ಥೆಯಲ್ಲಿ ಆದರಲ್ಲಿ ಒಂದು ತಾಸು ದುಡಿದರೆ ಅವನ ರಳು ಒಂದು ಮೈಲು ದೂರ ಚಲಿಸಿದಂತಾಗುತ್ತಿತ್ತು. ೬೦ ವರ್ಷ ಇದೇ ವ್ಯವಸ್ಥೆ ಡೆದು ಬಂತು. ವಾಷಿಂಗ್ಟನ್ ವಿಶ್ವವಿದ್ಯಾನಿಲಯದ ಡಾ॥ ದ್ವೋರಕ್ ಎಂಬಾತ ಅಕ್ಷರಗಳ ಸ್ಥಾನ ಬದಲಿಸಿ ತಯರಿಸಿದ ಹೊಸ ಯಂತ್ರದಿಂದಾಗಿ ಹೊಸ ಬೆರಳು ಳ ಕೆಲಸ ಹತ್ತು ಪಾಲು ತಗ್ಗಿತು.

ಶೋಲ್ಸ್ ೧೮೯೦ ರಲ್ಲಿ ತೀರಿಕೊಂಡ. ಇಂಥ ಉಪಕಾರಿ ಯಂತ್ರ ಶೋಧಿಸಿದ. ಆತ ದರಿಂದಾಗಿ ಗಳಿಸಿದ ಹಣ ೬೦ ಸಾವಿರ ರೂಪಾಯಿ ಮಾತ್ರ. ಅವನು ಅದರ ಫಲವ ನ್ನುಣ್ಣದೆ ಬಡವನಾಗಿಯೇ ತೀರಿಕೊಂಡ. ಅವನ ಮರಣ ಶತಾಬ್ದದ ಸಂದರ್ಭ ಮೇರಿಕದಲ್ಲಿ ಟೈಪ್‌ರೈಟರ್ ಸಂಗ್ರಹಾಲಯವೊಂದನ್ನು ಸ್ಥಾಪಿಸಿ ಈ ವರೆಗೆ ಅದು ಳೆದು ಬಂದ ಮಾದರಿಗಳನ್ನು ಅಲ್ಲಿ ಜೋಡಿಸಿಡಲಾಗಿದೆ.

---

ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ,
ಮಂಡೋದರಿ ಕಪ್ಪೆಯ ಮಗಳು !
ಕುಲವನರಸದಿರಿಂ ಭೊ, ಕುಲದಿಂದ ಮುನ್ನೇನಾದಿರಿಂ ಭೊ !
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮುಚ್ಚಿಗ,
ಕಶ್ಯಪ ಕಮ್ಮಾರ, ಕೌಂಡಿಲ್ಯನೆಂಬ ಋಷಿ
ಮೂರು ಭುವನವರಿಯೆ ನಾವಿದ ಕಾಣಿ ಭೊ !
ನಮ್ಮ ಕೂಡಲಸಂಗನ ವಚನವಿಂತೆಂದುದು :
ಶ್ವಪಚೋಪಿ.........ಯಾದರೇನು, ಶಿವಭಕ್ತನೇ ಕುಲಜನು.

— ಬಸವಣ್ಣ

# ವಿಜ್ಞಾನ ಮತ್ತು ಆಧ್ಯಾತ್ಮ

ಹೆಚ್. ಎಸ್. ನರಸಿಂಹಜೀಯರ್, ಶ್ರೀ ಬಸವೇಶ್ವರ ಇಂಗ್ಲೀಷ್ ಸ್ಕೂಲ್, ತುಮಕೂರು-2

ನಮ್ಮ ಹಿಂದಿನ ಮಹರ್ಷಿಗಳು ತಮ್ಮ ಯೋಗಾಭ್ಯಾಸದಿಂದ ಪಡೆದ ಅಂತ-ಜ್ಞಾನ (intutive perception) ದಿಂದ ವೇದ ಉಪನಿಷತ್ತುಗಳನ್ನು ಬರೆದರು. ಆಧ್ಯಾತ್ಮ ಭಾಷೆಯಲ್ಲಿ ಇದನ್ನು ಪ್ರಜ್ಞಾ ಅಥವಾ ಪ್ರತಿಭಾ ಎನ್ನುತ್ತಾರೆ. ಇಂತಹ ಜ್ಞಾನವನ್ನು ತಮ್ಮ ಯೋಗ ಸಾಧನೆಯಿಂದ ವಿಶ್ವದ ಅನಂತ ಶಕ್ತಿಯಿಂದ ನೇರವಾಗಿ ಪಡೆಯಬಲ್ಲವರಾಗಿದ್ದರು. ಡಾ|| ಗಂಗೂಲಿ ಮತ್ತು ಇತರ ಕೆಲವರ ಅಭಿಪ್ರಾಯ-ದಂತೆ " Vedic knowledge was a direct giff of revelea-tion to $eers and sages who, in their higher reaches of yogic realisation, were competent to receive it from a source, Perfect and immaculate'' ಬುದ್ಧನು ತನ್ನ ತಪಸ್ಸಿನಿಂದ ಇಂತಹ ಜ್ಞಾನೋದಯ ಹೊಂದಿದನು. ಇದೇರೀತಿ ಅನೇಕ ಸಾಧು ಸಂತರು ಮಹಾಮಹಿಮರು ಅಂತಜ್ಞಾನ ಪಡೆದಿದ್ದರು "When the obser ving human mind becomes attuned to the cosmic consciousness within and arrcund and focusses att-ention on any Problem, the underlying truth comes as a flash" ಎಂಬುದನ್ನು ವಿಜ್ಞಾನಿಗಳು ಒಪ್ಪುತ್ತಾರೆ.

ಡಾ|| ಆರ್. ಡಿ. ರ್‍ಯಾನಡೆ, ಅಲಹಾಬಾದ್ ವಿಶ್ವವಿದ್ಯಾಲಯದ ಮಾಜಿ ಕುಲ ಪತಿಗಳು ''Intution far from Contradicting reason, feeli-ng or will, does Penetrate them because it is at the back of then all'' ಎಂದು ಹೇಳಿದ್ದಾರೆ. Intution ಎಂದರೆ seeing intelligence or truth bearing intellect which grasps reality'' ಎಂಬುದಾಗಿ ಡಾ|| ಗಂಗೂಲಿ ಹಾಗೂ ಇತರ ವಿಜ್ಞಾನಿಗಳು ತಿಳಿಸಿ ದ್ದಾರೆ. ಇದನ್ನೇ ಆಧುನಿಕವಾಗಿ Super reason or Supra rational Perception ಎನ್ನುತ್ತಾರೆ.

ವಿಜ್ಞಾನವು ಮಾನವನ ಜ್ಞಾನವನ್ನು ಅಪಾರವಾಗಿ ಹೆಚ್ಚಿಸಿದೆ. ಇತ್ತೀಚೆಗೆ ಈ ವಿಜ್ಞಾನ Sub - Atomic level ಗೆ ಬಂದಾಗ ಎಲ್ಲಾ ವಿಜ್ಞಾನಿಗಳೂ, ಮನಶ್ಶಾಸ್ತ್ರಜ್ಞರೂ, ಜೀವ ಶಾಸ್ತ್ರಜ್ಞರು. ಹಾಗೂ ಭೌತ ವಿಜ್ಞಾನಿಗಳೂ ಸಹ ಈ ಅಂತಜ್ಞಾನದ ಮಹತ್ವವನ್ನು ಒಪ್ಪಲು ಪ್ರಾರಂಭಿಸಿದ್ದಾರೆ.

Dr- Kenneth walker ಎಂಬ ಇಂಗ್ಲೆಂಡಿನ ಪ್ರಸಿದ್ಧ ಸರ್ಜನರು There exist higher levels of Consciousness as the en who have attained them have access to Know-edge that is not accessible to others who function n the ordinary level" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಡಾ॥ ಸಿಲ್‌ಎಂಪೂಲೆ ಎಂಬುವರು "Intution is the voice of the cos-nic Reffer Seript consciousness in man" ಎಂದಿದ್ದಾರೆ.

ಭೌತ ಶಾಸ್ತ್ರಜ್ಞರಾದ Dr. Fritjof Copra ರವರಂತೆ "Though ational Knowledge and rational activities constitute he major part of scientific research, they are not ll there is to it. The rational part of research would in act be useless if it were not Complemeted intution hat gives scientists new insights and makes them creative." ಅನೇಕ ವಿಜ್ಞಾನಿಗಳು ಈ ಅಭಿಪ್ರಾಯವನ್ನು ಒಪ್ಪುತ್ತಿಲ್ಲ. ಏಕೆಂದರೆ ವಿಜ್ಞಾನದಂತೆ ಈ ವಿಧಾನದಲ್ಲಿ Methodofo bservation collection of data, reasoning, experimentation ಯಾವ ಹಂತಗಳೂ ಇಲ್ಲ. ನೇರವಾಗಿ ಅಂತಹ ಜ್ಞಾನ ಹೇಗೆ ಬರಬಲ್ಲುದು, ಎಂಬುದೇ ಅವರಿಗೆ ಅನುಮಾನ ವಾಗಿದೆ. ಇಂತಹವರಿಗಾಗಿ ಪ್ರಸಿದ್ಧಭೌತಶಾಸ್ತ್ರ ವಿಜ್ಞಾನಿಗಳಾದ Dr. Phillip Frank ಎಂಬುವರು, The scientist is not an inventor of formulae, he "sees" the formulae wih his "inner eye" by looking at the observable phenomena and makes use of his intution to discover that formula. Some Scientists hesitate to acknowledge their debt. to intution for the tear that this faculty may be in-compatible with their Conception of themselves as "men of facts" ಎಂಬುದಾಗಿ ಬಿಚ್ಚು ಮನಸ್ಸಿನಿಂದ ಹೇಳಿದ್ದಾರೆ. ಅನೇಕ ವಿಜ್ಞಾನಿಗಳೇ "All atomic nucler would be made in stars" ಎಂಬ Heyle ರವರ ಹೇಳಿಕೆ, ನ್ಯೂಟನ್ನನ "Law of gravitation," ಡಾರ್ವಿನ್ನರ 'Theory of Evolution" ಇವೆಲ್ಲವೂ ಅಂತರ್ಜ್ಞಾನದಿಂದ ಹೊರಹೊಮ್ಮಿವೆಯೆಂದು ಒಪ್ಪಿಕೊಂಡಿದ್ದಾರೆ.

ಈ ರೀತಿ ಅನೇಕ ವಿಜ್ಞಾನಿಗಳ ಅಭಿವ್ಯಕ್ತವನ್ನು ಪರಿಶೀಲಿಸಿದಾಗ ಅಂತಜ್ಞಾನದಿಂದ ಇಂತಹ ಅನೇಕ ಸತ್ಯಪ್ರಮಾಣಗಳು ದೊರೆತಿವೆ ಎಂಬುದು ಗೊತ್ತಾಗುತ್ತದೆ. ಆದ್ದರಿಂದ ಹಿಂದಿನ ನಮ್ಮ ಮಹರ್ಷಿಗಳು ಸಾಧುಸಂತರು ಇಂತಹ ಅಂತಜ್ಞಾನದ (intutive Perception) ದಿಂದಲೇ ವೇದ, ಉಪನಿಷತ್ತುಗಳನ್ನು ಬರೆದಿದ್ದಾರೆ ಎಂಬುದನ್ನೂ ಎಲ್ಲರೂ ಒಪ್ಪಬಹುದಾಗಿದೆ. ಆದ್ದರಿಂದಲೇ ಅವುಗಳಲ್ಲಿ ಬರುವ ವಿಚಾರಗಳು ಸತ್ಯ ಪ್ರಮಾಣವಾಗಿರಲೇಬೇಕಲ್ಲವೆ ? ಇಂತಹ ಜ್ಞಾನವನ್ನು ವಿಜ್ಞಾನದಲ್ಲಿ ನಾವು ಅನುಸರಿಸುವ ಯಾವಹಂತಗಳನ್ನೂ ಅನುಸರಿಸದೆ ನೇರವಾಗಿ ಆಧ್ಯಾತ್ಮ ಜೀವಿಗಳು ಪಡೆಯಬಲ್ಲವರಾಗಿದ್ದರು ಈ ಬಗ್ಗೆ ಡಾ॥ ಅಲೆಕ್ಸಿ ಕ್ಯಾರೆಲ್‌ರವರ ಹೇಳಿಕೆ ಹೆಚ್ಚಿನ ಸಮರ್ಥನೆ ನೀಡುತ್ತದೆ. ಅವರ ಹೇಳಿಕೆ ಈ ರೀತಿ ಇದೆ.

" Great discoveries are not the Product of intelligence alone, Men of genius in addition to their proess of Observation and Comprehension pessess other qualities such as intution and creative imagination. Through intution, they learn, without analysis, without reasoning, what is important for them to know. All great men are endowed with intution "

---

ಕಾಯದ ಕವಳಕ್ಕಂಜಿ 'ಕಾಯಯ್ಯಾ' ಎನ್ನೆನು;
ಜೀವನೋಪಾಯಕ್ಕಂಜಿ ಈಯಯ್ಯಾ ಎನ್ನೆನು,
"ಯದ್‌ಭಾವಂ ತದ್‌ಭವತಿ" ಉರಿ ಬರಲಿ, ಸಿರಿಬರಲಿ-
ಬೇಕು ಬೇಡೆನ್ನೆನಯ್ಯಾ.
ಆ ನಿಮ್ಮ ಹಾರೆನು, ಮಾನವರ ಬೇಡೆನು;
ಆಣೆ, ನಿಮ್ಮಾಣೆ, ಕೂಡಲ ಸಂಗಮದೇವಾ.

— ಬಸವಣ್ಣ

# ಪ್ರಪಂಚದ ಅತಿ ಸ್ಥೂಲಕಾಯ ವ್ಯಕ್ತಿ ವಾಲ್ಟರ್ ಹಡ್ಸನ್.

ಬಿ ಸುಬ್ರಾಯ ಅಡಿಗ ನಿವೃತ್ತ ಉಪಾಧ್ಯಾಯ, ಸಂಡೂರು-583119, ಬಳ್ಳಾರಿ ಜಿಲ್ಲೆ.

ಕೆಲವರ್ಷಗಳ ಹಿಂದೆ ಉತ್ತರ ಅಯಲ್ಯಾಂಡ್ ನಿವಾಸಿ 'ರೋಲೀ ಮಿನ್ ಟಾಯರ್' ವಿಶ್ವದ ಅತಿ ಸ್ಥೂಲದೇಹಿಯೆನಿಸಿದ್ದ. ಗಿನ್ನಿಸ್ ಬುಕ್ ಆಫ್ ವರ್ಲ್ಡ್ ರಿಕಾರ್ಡ ದಲ್ಲಿ ಹೆಸರು ಪಡೆದಿರುವ ಈತ ಅದೆಷ್ಟು ದಪ್ಪ ಇದ್ದನೆಂದರೆ, ಇವನಿಗೆ ಮಲಗಲು ದಪ್ಪ ಕಟ್ಟಿಗೆಯಿಂದ ತಯಾರಿಸಲಾದ ವಿಶಿಷ್ಟ ರೀತಿಯ ಬಲಿಷ್ಠ ಮಂಚ ಬೇಕಾಗುತ್ತಿತ್ತು. ೨೬೨ ಕಿಲೋಗ್ರಾಮ್ ಭಾರದ ರೋಲೀ ಮಿನಟಾಯರ್‌ನ ಡೊಂಕಾದ ಸುತ್ತಳತೆ ೨.೭ ಮೀಟರ್. ಇದು ಅವನ ಎತ್ತರಕ್ಕಿಂತ ೨೦ ಸೆಂಟಿಮೀಟರ್ ಹೆಚ್ಚಾಗಿತ್ತು !

ಒಮ್ಮೆ ಆತ ತನ್ನ ದೇಶದಲ್ಲೇ ನಡೆಯುತ್ತಿದ್ದ ಒಂದು ಫುಟಬಾಲ್ ಪಂದ್ಯವನ್ನು ನೋಡಲು ಹೋದ. ಸ್ಟೇಡಿಯಮ್‌ನ ಬಾಗಿಲ ಒಳಹೊಕ್ಕಾಗ ಆಕಸ್ಮಾತ್ ಅವನ ಬಾಯಿಯಿಂದ ಚೀತ್ಕಾರ ಹೊರಟಿತು. ಏಕೆಂದರೆ ಆತ ಬಾಗಿಲ ನಡುವೆ ಸಿಕ್ಕಿ ಕೊಂಡಿದ್ದ. ಈಗ ಆತ ಒಳಗೂ ಹೋಗುವಂತಿರಲಿಲ್ಲ, ಹೊರಗೂ ಬರುವಂತಿರಲಿಲ್ಲ! ನೋವಿನಿಂದ ಚೀರುತ್ತಿರುವ ರೋಲೀಮಿನ್ ಟಾಯರ್‌ನನ್ನು ಹೊರತೆಗೆಯಲು ಸ್ಟೇಡಿಯಮ್‌ನ ಬಾಗಿಲನ್ನೇ ಒಡೆಯಬೇಕಾಯಿತು.

ರೋಲೀಮಿನ ಟಾಯರ್ ಅದೆಷ್ಟು ಸ್ಥೂಲ ದೇಹಿ ಯೆಂದರೆ ಅವನ ತೊಡೆಗಳು ನಿರಂತರ ದಪ್ಪವಾಗುತ್ತ ಹೋದುದರಿಂದ ಮೂರು ವಾರಗಳಿಗೊಮ್ಮೆ ಪ್ಯಾಂಟ್ ಬದಲಾಯಿಸಬೇಕಾಗಿರುತ್ತಿತು. ಸ್ಥೂಲತೆ ಅವನ ಪಾಲಿಗೆ ಅಭಿಶಾಪ ವಾಗಿತ್ತು. ಅದರಿಂದಾಗಿಯೇ ಅವನನ್ನು ಮದುವೆಯಾಗಲು ಯಾವ ತರುಣಿಯೂ ಸಿದ್ಧಳಿರಲಿಲ್ಲ.

ಒಮ್ಮೆ ರೋಲೀ ತನ್ನ ಆರೋಗ್ಯ ಪರೀಕ್ಷೆಗಾಗಿ ತನ್ನ ಚಿಕಿತ್ಸಕನ ಬಳಿ ಹೋದ. ಆಗ ಅವನ ಬದುಕಿನಲ್ಲಿ ಅಕಸ್ಮಾತ್ ಭೂಕಂಪ ಉಂಟಾದಂತಾಯಿತು. ಇದೇ ರೀತಿ ದೇಹ ದಪ್ಪವಾಗುತ್ತ ಹೋದರೆ ನೀವು ಆರು ತಿಂಗಳಿಗಿಂತ ಹೆಚ್ಚು ಉಳಿಯಲಾರಿರಿ — ಎಂದು ಚಿಕಿತ್ಸಕನು ಸ್ಪಷ್ಟವಾಗಿ ನುಡಿದ. ಹೆಚ್ಚುಕಾಲ ಬದುಕುವ ಇಚ್ಛೆಯಿದ್ದರೆ ಹಸಿತರಕಾರಿ ಮತ್ತು ಹಣ್ಣುಗಳನ್ನು ಮಾತ್ರ ಸೇವಿಸಬೇಕೆಂದೂ ಮಾಂಸ, ಬಿಯರ್ ಮೊದಲಾದವನ್ನು ಬಿಟ್ಟುಬಿಡಬೇಕೆಂದೂ ಆತ ಸಲಹೆಯಿತ್ತ.

ಈಗ ರೋಲೀ ತಾನು ಬಹುಕಾಲ ಬದುಕಬೇಕೆಂಬ ದೃಢನಿರ್ಧಾರದೊಂದಿಗೆ ಚಿಕಿತ್ಸಕನ ಸಲಹೆಯನ್ನು ಚಾಚೂ ತಪ್ಪದೆ ಪಾಲಿಸಿದ. ಮೊದಮೊದಲು ಅವನಿಗೆ ತುಂಬಾ ಕಷ್ಟವಾಯಿತು. ಆದರೆ ಬರುಬರುತ್ತ ಅದು ಅಭ್ಯಾಸವಾಯಿತು. ಈ ಕ್ರಮದಿಂದ

ಮೆಲ್ಲಮೆಲ್ಲನೆ ಅವನ ಭಾರ ಹಾಗೂ ಸ್ಥೂಲತೆ ಕಡಿಮೆಯಾಗತೊಡಗಿತು. ಈ ರೀತಿ ಅವನ ಭಾರ ಕುಗ್ಗಿ ಬರೇ ೮೫.೬ ಕಿಲೋ ಉಳಿಯಿತು !

ಇತ್ತೀಚೆಗೆ ಇಂಗ್ಲೆಂಡಿನ ಒಂದು ಆರೋಗ್ಯ ಪತ್ರಿಕೆ ತನ್ನ ವಾರ್ಷಿಕ ಸಮಾರಂಭದಂದು ರೋಲೀ ಮಿನಿಟಾಯರ್‌ನಿಗೆ ಒಂದು ಸಾವಿರ ಪೌಂಡ್ ಪುರಸ್ಕಾರ ನೀಡಿ ಗೌರವಿಸಿತು. ಈಗ ಆತ ವಿಶ್ವದ ಅತಿ ತೆಳುವ್ಯಕ್ತಿಯೆಂದು 'ಗಿನ್ನೀಸ್ ಬುಕ್ ಆಫ್ ವರ್ಲ್ಡ್ ರಿಕಾರ್ಡ್' ದಲ್ಲಿ ನಮೂದಿಸಲ್ಪಟ್ಟಿದ್ದಾನೆ.

ಗುಡ್ಡಕ್ಕೆ ಗುಡ್ಡ ಅಡ್ಡ — ಎಂಬ ಗಾದೆಯಂತೆ ಭಾರತದಲ್ಲಿ ರೋಲಿ ಮಿನಿಟಾಯರ್‌ನನ್ನು ಮೀರಿಸುವ ವಾಲ್ಟರ್ ಹಡ್ಸನ್ ಎಂಬುವನು ಈಗ ಅತ್ಯಂತ ಸ್ಥೂಲಕಾಯನೆಂದು ಪ್ರಸಿದ್ಧಿಪಡೆದಿದ್ದಾನೆ. ಅವನ ಭಾರ ೫೪೬ ಕಿಲೋ ರೋಲೀಯ ಭಾರದ ಇಮ್ಮಡಿಗಿಂತಲೂ ಹೆಚ್ಚು !

ಹ್ಯಾಮಸ್ಟ್ಯಾಡ್‌ದಲ್ಲಿ ೨೫–೧೨-೧೯೮೭ ರಂದು ವಿಶ್ವದ ಈ ಅತಿ ಸ್ಥೂಲದೇಹಿ ಯಾವುದೇ ಆಧಾರವಿಲ್ಲದೆ ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ನಡೆದು ಹೋದ ಈ ರೀತಿ ಸುಮಾರು ೨೦ ಅಡಿ ಸಾಗಿದುದು ತನಗೆ ಹೊಸ ಹುಟ್ಟು ಬಂದಂತೆ — ಎಂದು ಹಡ್ಸನು ಭಾವಿಸಿದ್ದಾನೆ. ಆದಕ್ಕಾಗಿ ಆತ ೧೬೯ ಕಿಲೋ ಗ್ರಾಮ್ ಭಾರ ಇಳಿಸಿಕೊಂಡಿದ್ದ ಅದು ಏಕೆಂದರೆ ಸುಮಾರು ೧೬ ವರ್ಷ ಕಾಲ ಆತ ಒಂದೇ ಕೋಣೆಯಲ್ಲಿ ಕಳೆದಿದ್ದ. ಇದು ತನಗೆ ದೊರೆತ ಅತಿ ದೊಡ್ಡ ಕ್ರಿಸ್‌ಮಸ್ ಕಾಣಿಕೆಯೆಂದು ಆತ ಹಿಗ್ಗಿ ನುಡಿದ.

ಅದಕ್ಕೆ ಮುನ್ನ ಹಡ್ಸನ್ ೧೬ ವರ್ಷ ಕಾಲ ಒಂದೇ ಕೋಣೆಯಲ್ಲಿ ಉಳಿದಿರಬೇಕಾಯಿತು. ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಸಾಗಿದ ಈ ಐತಿಹಾಸಿಕ ಪಾದಯಾತ್ರೆಯ ಬಳಿಕ ಆತ ಸುದ್ದಿಗಾರರನ್ನು ಭೇಟಿಯಾದ. ಆ ವೇಳೆ ಆತ ೬.೩ ಮೀಟರ್ ಉದ್ದನೆಯ ಬಿಳಿ ಹಾಗೂ ನೀಲಿ ಬಟ್ಟೆಯಿಂದ ತಯಾರಾದ ಟೆಂಟ್‌ದಂತಹ ಅಂಗಿ ತೊಟ್ಟಿದ್ದ. ತಾನಿನ್ನು ಸ್ವತ ನಡೆದು ಮನೆಯಿಂದ ಹೊರ ಬರುವ ಪ್ರಯತ್ನ ನಡೆಸುವುದಾಗಿ ಹಡ್ಸನ್ ಹೇಳಿದ. ಗಿನ್ನೀಸ್ ವಿಶ್ವದಾಖಲೆಯಲ್ಲಿ ಹಡ್ಸನನ ಹೆಸರು ಎಲ್ಲರಿಗಿಂತ ಮೇಲಿದೆ !

೧೬೮೨ ರಲ್ಲಿ ಒಮ್ಮೆಲೇ ಅವನ ಹೆಸರು ವಿಶ್ವವಿಖ್ಯಾತವಾಯಿತು. ಏಕೆಂದರೆ ಆರಡಿ ಎತ್ತರದ ಹಾಗೂ ೯ ಅಡಿ ಸುತ್ತಳತೆಯ ಹಡ್ಸನ್ ತನ್ನ ಸ್ನಾನ ಗೃಹದ ಬಾಗಿಲೊಳಗೆ ಸಿಕ್ಕಿಕೊಂಡಿದ್ದ, ಅವನನ್ನು ಹೊರತೆಗೆಯಲು ತುರ್ತು ಚಿಕಿತ್ಸೆಯ ತಂತ್ರಜ್ಞನನ್ನು ಕರೆಯಿಸಬೇಕಾಯಿತು. ಕಷ್ಟ ಪಟ್ಟು ಅವನನ್ನು ಹೊರದೆಗೆದರು. ಆದರೆ ಮುಂದೆ ಅವನ ಭಾರ ಇಳಿಸಲೆಂದು ನೀರು, ಹಣ್ಣುಗಳ ರಸ ಹಾಗೂ ಒಂದು ರೀತಿಯ ಪೋಷಕಚೂರ್ಣದ ಮೇಲೆಯೇ ಅವನನ್ನು ಇರಿಸಲಾಯಿತು.

ಹಡ್ಸನ್ ಈಗ ಸ್ಥೂಲದೇಹಿಯಾದರೂ ಹೊಟ್ಟೆಬಾಕನಲ್ಲ. ಈಗ ತನಗೆ ಮನ ಬಂದಂತೆ ತಿನ್ನುವ ಇಚ್ಛೆ ಉಂಟಾಗುತ್ತಿಲ್ಲ ಎಂದು ಆತ ಸುದ್ದಿಗಾರರಿಗೆ ಹೇಳಿದ್ದಾನೆ. ಹಡ್ಸನ್ ತನ್ನ ಭಾರವನ್ನು ನಿರಂತರ ತಗ್ಗಿಸುವ ವಿಚಾರದಲ್ಲಿದ್ದಾನೆ. ಆದರೆ ಇದು ಸಾಧ್ಯವೋ ಅಲ್ಲವೋ ಎಂಬುದನ್ನು ಕಾಲವೇ ಹೇಳಬೇಕು.

ಸ್ನಾನ ಗೃಹದ ಬಾಗಿಲಲ್ಲಿ ಸಿಕ್ಕಿಕೊಂಡ ಬಳಿಕ, ಆತ ಸಾಮಾಜಿಕ ಕಾರ್ಯ ಕರ್ತ ಹಾಗೂ ಪೋಷಣ ತಜ್ಞ 'ಡಿಕ್ ಗ್ರೆಗೊರ್ರಿಯ ಮೇಲ್ವಿಚಾರಣೆಯಲ್ಲಿ ಆಹಾರ ತೆಗೆದು ಕೊಳ್ಳುತ್ತಿದ್ದಾನೆ. ಅವನ ಆಹಾರದ ಸ್ವರೂಪ ಪೂರ್ತಿ ಬದಲಾಗಿದೆ. ಈಗ ಆತ ಹಣ್ಣು ಹಾಗೂ ತರಕಾರಿಗಳನ್ನಷ್ಟೇ ಬಳಸುತ್ತಾನೆ. ಜತೆಗೆ ಗ್ರೆಗೊರಿ ಕೊಡು ತ್ತಿರುವ ಪುಡಿರೂಪದ ಆಹಾರವನ್ನು ಕಿತ್ತಳೆರಸದಲ್ಲಿ ತೆಗೆದುಕೊಳುತ್ತಿದ್ದಾನೆ.

ಹಡ್ಸನನ ಭಾರವನ್ನು ೬೮ ಪೌಂಡಿಗೆ ಇಳಿಸಬೇಕೆಂದು ಗ್ರೆಗೊರೀ ದೃಢನಿರ್ಧಾರ ಮಾಡಿರುವ. ಆದರೆ ಹಡ್ಸನ್ ರೋಲೀ ಮಿನಿಚಾಯರ್‌ನಷ್ಟು ತೆಳುಮನುಷ್ಯನಾ ದಾನೆ? ಎಂಬುದನ್ನು ಭವಿಷ್ಯವೇ ಹೇಳಬೇಕು! (ಹಿಂದಿಯಿಂದ)

---

## ವಿಶ್ವ ವೀರಶೈವ ಧರ್ಮದಲ್ಲಿಯೇ ಪ್ರಪ್ರಥಮ ವೀರಶೈವ ಡೈರೆಕ್ಟರಿ.

ವೀರಶೈವ ಧರ್ಮದ ಮಠ, ಮಂದಿರಗಳು, ಪುಣ್ಯಕ್ಷೇತ್ರಗಳು, ಮಠಾಧೀಶರು, ವೀರ ಶೈವ ವೈದ್ಯರು, ವಕೀಲರು, ಶಿಕ್ಷಣ ತಜ್ಞರು, ಅಭಿಯಂತರು ಉದ್ಯಮಿಗಳು ಸಾಹಿತಿ ಪತ್ರಕರ್ತರು ಸಮಾಜಸೇವಾ ಕಾರ್ಯಕರ್ತರು ಮುಂತಾದವರ ಬಗ್ಗೆ ಛಾಯಾಚಿತ್ರ ಸಹಿತ ವಿವರಗಳುಳ್ಳ ವೀರಶೈವ ಡೈರೆಕ್ಟರಿಯು ಈ ತಿಂಗಳಾಂತ್ಯದಲ್ಲಿ ಮುದ್ರಣಕ್ಕೆ ಹೋಗುತ್ತದೆ.

ಕಳೆದ ಆರು ತಿಂಗಳಿನಿಂದ ಈ ಬಗ್ಗೆ ವಿಷಯ-ವಿವರಣೆ ಸಂಗ್ರಹಿಸಲು ತೊಡಗಿದ್ದು ಎಲ್ಲ ಕಡೆಯಿಂದಲೂ ಸೂಕ್ತ ಪ್ರತಿಕ್ರಿಯೆ ಸಹಾಯ ಸಹಕಾರ ಸಿಗುತ್ತಿದೆ. ಇದು ಸರ್ವವಿಷಯ ಸಂಪನ್ನವಾಗಿ ಪ್ರಕಟವಾಗಬೇಕೆಂಬುದು ನಮ್ಮ ಹೆಬ್ಬಯಕೆ. ಈ ಬಗ್ಗೆ ಇದರಲ್ಲಿ ಮೇಲೆ ತಿಳಿಸಿದಂತೆ ವಿವರ ಮಾಹಿತಿಯನ್ನು ಛಾಯಾಚಿತ್ರ ಸಹಿತ ಕಳುಹಿಸಿ ಕೊಟ್ಟು ಈ ಕಾರ್ಯ ಯಶಸ್ವಿಯಾಗಿ ಆದರ್ಶ ಸಂಪುಟವಾಗುವಂತೆ ಸಕ್ರಿಯವಾಗಿ ಸಹಕರಿಸಲು ಈ ಮೂಲಕ ಕಳಕಳಿಯ ಮನವಿ ಮಾಡಿಕೊಳ್ಳುತ್ತೇವೆ.

**ಶಿವರುದ್ರಯ್ಯ ಪ. ಮ.**
ಬೆಂಗಳೂರು
ಸಹ ಸಂಪಾದಕರು

**ಷಡಕ್ಷರಿ ಶೆಟ್ಟರ**
ಎಂ. ಎ.
ಸಂಪಾದಕರು

**ವಿಳಾಸ :** ಸಂಪಾದಕರು, ವೀರಶೈವ ಡೈರೆಕ್ಟರಿ ನಂ. 3893,
ಹೊಸ ಹುಬ್ಬಳ್ಳಿ ಕಿಲ್ಲೆ, ಹುಬ್ಬಳ್ಳಿ-580 020.

# ವಿನ ತಪಸ್ವಿ (ಧಾರಾವಾಹಿ - ೩)

ಜಿ, ರಾಧಾದೇವಿ, ಕಾದಂಬರಿಗಾರ್ತಿ, ಜೆಸ್ತವಾರ ಪೇಟೆ, ರಾಯಚೂರು- 584101

ಸಂ:- ಶ್ರೀ ಧರ್ಮಸ್ಥಳದ ಮಂಜಯ್ಯ ಹೆಗ್ಗಡೆ ಅವರ ಮಹಾಸಾಧನೆ ಕುರಿತು ಜಾನಪದ ರೂಪದಲ್ಲಿ ಧಾರಾವಾಹಿಯಾಗಿ ಲೇಖಕರು ಪರಿಚಯಮಾಡಿಕೊಟ್ಟಿದ್ದಾರೆ.

ಮಾತನಾಡುವ ಮಂಜುನಾಥ ಸುವ್ವಲಾಲಿ
ನಮ್ಮ ಶ್ರೀ ಮಂಜಯ್ಯ ಹೆಗಡೇರುಸುವ್ವಲಾಲಿ
ಪ್ರೀತಿ ಪ್ರೇಮ ಅವರುಸಿರು ಸುವ್ವಲಾಲಿ
ಜನ ಹಿತಕಾಗಿಯೆ ಬಾಳಿದರು ಸುವ್ವಲಾಲಿ

ವಿಶ್ವ ಕುಟುಂಬಿಯಾಗಿ ಬಾಳಿದ ಇವರ ವೈಯಕ್ತಿಕ ಬದುಕು ಗುರುತಿಸುವುದು ಬಹುಕಷ್ಟ, ತಮ್ಮ ಅಸಾಧಾರಣಾ ಮೇಧಾವಿ ತನ, ಶ್ರೀ ಕ್ಷೇತ್ರದ ಧನ ಜನಬಲ- ತಮ್ಮ ಅಧಿಕಾರ ವರ್ಚಸ್ಸು ತಮ್ಮ ಪ್ರಭಾವ ಎಲ್ಲಾ ಲೋಕ ಕಲ್ಯಾಣಕ್ಕೆ ನೀಡಿದರು,

ನೀರು ತುಂಬಿದ ನದಿ ಸುವ್ವಲಾಲಿ
ಬಾಯಾರಿ ಬಂದವರಿಗೆ ಸುವ್ವಲಾಲಿ
ಹಣ್ಣು ತುಂಬಿದ ಮರ ಸುವ್ವಲಾಲಿ
ಹಸಿದು ಬಂದವರಿಗೆ ಸುವ್ವಲಾಲಿ

ಹೀಗೆ ಸಜ್ಜನರ ಜನಬಲ, ಧನಬಲಗಳು ಪರೋಪಕಾರಕ್ಕೆ ಎಂಬುತ್ತಿದ್ದರು, ಶ್ರೀ ಕ್ಷೇತ್ರವನ್ನು ನವ ನವೀನವಾಗಿ, ಸುಂದರ ಸುಮಧುರವಾಗಿ ಹೇಗೆ ಅಲಂಕರಿಸ ಬೇಕೆಂಬುದರ ಬಗ್ಗೆ ಅವರ ಮನಸ್ಸಿನಲ್ಲಿ ಅಪೂರ್ವ ಯೋಜನೆಗಳು ಹೊಳೆಯುತ್ತಿದ್ದವು. ಅದು ಅವರ ಮೇಧಾವಿತನದ ಧ್ಯೋತಕವಾದರೆ, ಅದನ್ನು ಕಾರ್ಯರೂಪಕ್ಕೆ ಇಳಿಸಲು ಒಂದು ತಂಡ ಪರಿಣಿತರಾದ ಜನ ಇವರ ನೇತೃತ್ವದಲ್ಲಿ ದುಡಿಯುತ್ತಿದರು,
ಶ್ರೀ ಕ್ಷೇತ್ರದ ಉತ್ಪತ್ತಿಯು ದಿನದಿನಕ್ಕೆ ಸಮೃದ್ಧಿಯಾಯಿತು, ಒಳ್ಳೆಯ ಮೇಧಾವಿ ತನ್ನ ಜನಬಲ, ಧನಬಲ ಕೂಡಿದರೆ ಏನಾಗಲಾರದು ?

ಬೆಳ್ಳಿರಥ ಬೆಳಗಿತು ಸುವ್ವಲಾಲಿ
ಬ್ರಹ್ಮ ಕಲಶಮೆರೆಯಿತು ಸುವ್ವಲಾಲಿ
ಹವನ, ಹೋಮ ದ್ರವ್ಯಕಲಶ ಸುವ್ವಲಾಲಿ
ಶ್ರೀ ಕ್ಷೇತ್ರ ಧರ್ಮದ ನೆಲೆಯಾಯ್ತು ಸುವ್ವಲಾಲಿ

ಶ್ರೀ ಕ್ಷೇತ್ರದ ದೈವಿ ಆರಾಧನೆ ಪೂರ್ಣಾಂಶದಿಂದ ವಿಜೃಂಭಿಸಿ|ಜನರಿಗೆ ಅಪೂರ್ವ ದೈವಿ ಸಾಕ್ಷಾತ್ಕಾರವಾಗಲೂ ಹೊಸ ಹೊಸ ಉತ್ಸವಗಳಲ್ಲಿ ಪಾಲ್ಗೊಂಡು ಜನರು

ಹೊಸ ಉಲ್ಲಾಸ ಪಡೆಯಲು ಇವು ಕಾರಣವಾದವು. ಇನ್ನು ಧರ್ಮದ ಬಗ್ಗೆ ಜನರಿಗಿರುವ ಅಜ್ಞಾನವನ್ನು ತೊಲಗಿಸಲು ಸರ್ವಧರ್ಮಗಳ ಸಾರವೊಂದರ ಎಂಬ ಬೆಳಕು ಮೂಡಿಸಲು ಸರ್ವಧರ್ಮ ಸಮ್ಮೇಳನ ಪ್ರಾರಂಭಿಸಿದರು.

ಸಾಹಿತ್ಯ, ಲಲಿತಕಲೆಗಳಲ್ಲಿ ಇವರಿಗೆ ಅಪಾರ ಅಭಿರುಚಿ, ಸ್ವತಃ ಖ್ಯಾತ ಚಿತ್ರಗಾರರೂ ಹೌದು! ಕಲಾವಿದರನ್ನು, ಚಿತ್ರಗಾರರನ್ನು, ಸಾಹಿತಿಗಳನ್ನು ಬರ ಮಾಡಿಕೊಂಡು ಅವರ ಕಲೆ ಪ್ರಕಾಶಗೊಳಿಸಿ, ಜನರಿಗೆ ತಲುಪುವಂತೆ ಮಾಡಿ ಅವರೊಂದಿಗೆ ಚರ್ಚಿಸಿ ಮಾರ್ಗದರ್ಶನನೀಡಿ ಅಪಾರವಾದ ಸಂಭಾವನೆ ನೀಡಿ ಸತ್ಕರಿಸುತ್ತಿದ್ದರು, ಇವರಿಗೆ ಕೊಡುಗೈ ದೊರೆ, ಅಭಿನವ ಭೋಜರಾಜ ಎಂದು ಅಭಿಮಾನಿಗಳು ಸಂತಸದಿಂದ ನುಡಿಯುವರು,

ತನಗೆ ತಾನೆ ಗುರುವಾಗಿ ಸುವ್ವಲಾಲಿ
ಅಪೂರ್ವ ಚಿತ್ರಕಲೆ ರಚಿಸಿದ್ರೊ ಸುವ್ವಲಾಲಿ
ನಿಸರ್ಗವೇ ಪ್ರೇರಕವಾಗಿ ಸುವ್ವಲಾಲಿ
ಸರ್ವಕಾಲಕ್ಕು ಉಳಿಯುವ ಕಲೆ ರಚಿಸಿದರು ಸುವ್ವಲಾಲಿ.

ಚಿಕ್ಕಂದಿನಿಂದ ಒಲಿದುಬಂದ ಚಿತ್ರಕಲೆಗೆ ಮೊದಲು ಇವರಲ್ಲಿ ಮೂಡಿದ್ದ ಆಸೆಯೆಂದರೆ ಮುಂಬೈ ಕಲಾಶಾಲೆಯಲ್ಲಿ ಅಭ್ಯಸಿಸಬೇಕು, ಅಥವಾ ಆಗಿನ ಮಹಾನ್ ಚಿತ್ರಕಾರರಲ್ಲಿ ಅಭ್ಯಸಿಸಿ ಪರಿಣಿತರಾಗಬೇಕೆಂದು.

ಆದರೆ ಕೆಲವು ಕಾರಣಗಳಿಂದ ಅವರ ಆಶೆ ಫಲಿಸಲಿಲ್ಲ, ಹಾಗೆ ಅವರಾಶೆ ಫಲಿಸಿದ್ದರೆ ಆಗಿನ ಕಾಲದ ಪ್ರಸಿದ್ಧ ಚಿತ್ರಗಾರರಲ್ಲಿ ಒಬ್ಬರಾಗಿ ಲೌಕಿಕವಾದ ಕೆಲವು ಚಿತ್ರ ರಚಿಸುತ್ತಿದ್ದರೇನೊ? ಆದರೆ ಅವರ ಅಪಾರ ಪಾಂಡಿತ್ಯವೇ ಅವರ ಗುರುವಾಯಿತು, ಧರ್ಮ ದೈವಭಕ್ತಿಯ ಅಮೂರ್ತವಾದ ಭಾವನೆ ಚಿತ್ತರಿಸುವ ಆಧ್ಯಾತ್ಮಿಕ ಲೋಕದಲ್ಲಿ ಎಂದೆಂದು ಪೂಜಿಸಲ್ಪಡುವ ಸಾರ್ವಕಾಲಿಕವಾದ ಹಲವುಚಿತ್ರಗಳು ಇವರಿಂದ ರಚಿಸಲ್ಪಟ್ಟವು, ಇವರ ಚಿತ್ರಗಳಲ್ಲಿ ಧರ್ಮದ ಬೆಳಕು ಆರ್ತಾನುಕಂಪ, ದೈವಿಸಾಕ್ಷಾತ್ಕಾರ, ನಿಸರ್ಗದ ವರ್ಚಸ್ ವಿಜೃಂಭಿಸುತ್ತವೆ. ಈ ಕಾರಣಗಳಿಂದಲೆ ಇವುಗಳು ಎಂದೆಂದು ಉಳಿಯುವ ಚಿತ್ರಗಳು, ಸರ್ವಕಾಲಕ್ಕೆ ಸಲ್ಲುವ ಅಪೂರ್ವಕಲೆ.

ಆಗಿನ ಕಾಲದಲ್ಲಿ ಶ್ರೀ ಕ್ಷೇತ್ರದ ಸುತ್ತ ಮುತ್ತ ಒಳ್ಳೆವೈದ್ಯಕೀಯ ಸೌಲಭ್ಯವಿರಲಿಲ್ಲ, ಆರ್ಯುವೇದ ಹೋಮಿಯೋಪತಿ ಪದ್ಧತಿಗಳನ್ನು ಪೋಷಿಸಿ, ಅವುಗಳ ಸೌಲಭ್ಯ ಜನರಿಗೆ ದೊರಕುವಂತೆ ನೋಡಿಕೊಂಡರು.

ಸಂಚಾರಿ ಆಸ್ಪತ್ರೆಗಳನು ನಿರ್ಮಿಸಿ ಸುತ್ತ ಮುತ್ತಲ ಹತ್ತಾರು ಹಳ್ಳಿಯ ಜನ ಆದರ ಸೌಲಭ್ಯ ಪಡೆಯುವಂತೆ ಮಾಡಿದರು.

ಪಖ್ಯಾತ ನೇತ್ರತಜ್ಞ ಡಾ॥ ಮೋದಿ ಅವರನ್ನು ಕರೆಸಿ ಕಣ್ಣಿನ ಚಿಕಿತ್ಸಾ ಶಿಬಿರ ಏರ್ಪಡಿಸಿ ಕಣ್ಣಿನ ತೊಂದರೆಯಿಂದ ಬಳಲುತ್ತಿರುವ ಸಾವಿರಾರು ಜನರಿಗೆ ಚಿಕಿತ್ಸೆ ದೊರಕುವಂತೆ ಮಾಡಿದರು.

ಇನ್ನು ಶಿಕ್ಷಣ ರಂಗದಲ್ಲಿ ತಾಲೂಕಿನ ಮೊತ್ತ ಮೊದಲ ಹೈಸ್ಕೂಲನ್ನು ಉಜಿರೆಯಲ್ಲಿ ಪ್ರಾರಂಭಿಸಿದರು.

ಭಾರತೀಯ ಸಂಸ್ಕೃತಿ ಸನಾತನ ಪರಂಪರೆಗಳ ಉಳಿವಿಗಾಗಿ ಗುರುಕುಲ ಮೊದರಿಯ ಶಿಕ್ಷಣ ಕೇಂದ್ರ ಸಿದ್ಧವನವನ್ನು ಸ್ಥಾಪಿಸಿ ಇಲ್ಲಿದ ವಿದ್ಯಾರ್ಥಿ ಸ್ವಾವಲಂಬಿ ಆಗುವುದರ ಜೊತೆ ಭಾರತ ಸಂಸ್ಕೃತಿಯ ತಿರುಳಾದ ವೇದ, ಶಾಸ್ತ್ರ, ಪುರಾಣಗಳು ಅನ್ಯಧರ್ಮದವರ ಮಹಾ ಧರ್ಮ ಗ್ರಂಥಗಳು ಎಲ್ಲದರ ಬಗ್ಗೆ ಅಧ್ಯಯನ ಮಾಡಿ ತಿಳುವಳಿಕೆ ಪಡೆಯಲು ಅವಕಾವಿತ್ತು.

ಸಿದ್ಧವನ ಗುರುಕುಲದಲ್ಲಿ ಸುವ್ವಲಾಲಿ
ಅಧ್ಯಯನ ಮಾಡಿದರು ಸುವ್ವಲಾಲಿ
ಸಿದ್ಧಿ ಹೊಂದಿ ಸಕಲ ವಿದ್ಯೆಯಲ್ಲಿ ಸುವ್ವಲಾಲಿ
ಸದ್ಗುಣ್ಯ ವ್ಯಕ್ತಿಗಳಾಗಿ ಮೆರೆದರೊ ಸುವ್ವಲಾಲಿ ॥

— ಸಶೇಷ

---

ಕಣ್ಣೂ ಕಾಲದ ಎರಡುಳ್ಳವ ದೂರ ಎಯ್ದುವನಲ್ಲದೆ, ಕಣ್ಣೂ ಕಾಲೂ ಎರಡರೊಳಗೆ ಒಂದಿಲ್ಲದವನು ದೂರ ಎಯ್ದಲರಿಯನೆಂಬಂತೆ, ಜ್ಞಾನರಹಿತನಾಗಿ. ಕ್ರಿಯೆಯನೆಷ್ಟು ಮಾಡಿದಡೇನು, ಅದು ಕಣ್ಣಿಲ್ಲದವನ ನಡೆಯಂತೆ. ಕ್ರಿಯಾರಹಿತನಾಗಿ, ಜ್ಞಾನಿಯಾದಡೇನು, ಅದು ಕಾಲಿಲ್ಲದವನ ಇರವಿನಂತೆ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವ ಬೆರಸುವಡೆ ಜ್ಞಾನವೂ ಕ್ರಿಯೆಯೂ ಎರಡೂ ಬೇಕು.

ಆಧಾರ - ಸಮರ್ಪಣೆ

# ಕೃಷಿ ಮಾರಾಟದಲ್ಲಿ ಮಾಹಿತಿ ಸಂಗ್ರಹಣೆ.

ಡಿ. ವೆಂಕಟರಾವ್, ರೀಡರ್, ಸರ್ಕಾರಿ ಕಲಾ ಕಾಲೇಜ್, ಹಾಸನ.

ನಮ್ಮ ದೇಶ ಆರ್ಥಿಕವಾಗಿ ಸುಧಾರಿಸಿ, ಸುಖ – ನೆಮ್ಮದಿಗಳ ತವರೂರಾಗ ಬೇಕಾದರೆ ಬಡ ರೈತರು ಉದ್ಧಾರವಾಗಬೇಕು. ರೈತರ ಉದ್ಧಾರಅವರು ಬೆಳೆಯುವ ಉತ್ಪನ್ನಕ್ಕೆ ದೊರೆಯುವ ಬೆಲೆಯನ್ನು ಅವಲಂಬಿಸಿದೆ. ಆದ್ದರಿಂದಲೇ ಸರಕಾರ ಅನೇಕ ಸುಸಜ್ಜಿತ ಕೃಷಿ ಮಾರುಕಟ್ಟೆಗಳನ್ನು ಸ್ಥಾಪಿಸಿದೆ, ಇಂತಹ ಮಾರುಕಟ್ಟೆಗಳಲ್ಲಿನ ಸಮರ್ಥ ಮಾರಾಟ ಪದ್ಧತಿಯಿಂದ ಮಾತ್ರ ರೈತರ ಆರ್ಥಿಕ ಸ್ಥಿತಿ ಸುಧಾರಿಸಿ ಬೆಲೆಗಳಲ್ಲಿ ಸ್ಥಿರತೆಯನ್ನು ತರುವುದು ಸಾಧ್ಯ. ಮಾರುಕಟ್ಟೆಯ ಸುಗಮ ಹಾಗೂ ಸಮರ್ಥ ಕಾರ್ಯಕಲಾಪಗಳಿಗೆ ಅನೇಕ ಅಂಗಗಳ ನೆರವು ಅಗತ್ಯ, ಅವುಗಳಲ್ಲಿ 'ಮಾಹಿತಿ ಸಂಗ್ರಹಣೆಯೂ ಒಂದು.

ಮಾಹಿತಿ ಸಂಗ್ರಹಣೆಯು ಸುಗಮ ಮಾರಾಟ ಪದ್ಧತಿಗೆ ಅನವು ಮಾಡಿಕೊ ಡುವುದಲ್ಲದೆ ರೈತರಿಗೆ ವ್ಯವಸ್ಥಿತವಾಗಿ ಕೃಷಿ ಮಾಡುವಲ್ಲಿ ಮತ್ತು ಅವರ ಸರಕುಗಳಿಗೆ ಯೋಗ್ಯ ಬೆಲೆಯನ್ನು ಒದಗಿಸುವಲ್ಲಿ ಅತಿ ಮಹತ್ವದ ಪಾತ್ರ ವಹಿಸುತ್ತದೆ. ಕೃಷಿ ಉತ್ಪನ್ನಗಳ ಮಾರಾಟಕ್ಕೆ ಸಂಬಧಪಟ್ಟ ಎಲ್ಲಾ ಪ್ರಶ್ನೆಗಳಿಗೂ ಮಾಹಿತಿ ಸಂಗ್ರಹಣೆ ಸಮರ್ಪಕವಾದ ಉತ್ತರ ಪೂರೈಸುತ್ತದೆ, ಪ್ರಚೋದನಾತ್ಮಕ ಸಮಗ್ರ ಅಂಶಗಳನ್ನು ಒಳಗೊಂಡಿರುವುದರಿಂದಲೂ ಮಾರಾಟ ಚರ್ಚೆಯ ಮೇಲೆ ಹೆಚ್ಚಿನ ಪ್ರಭಾವ ಬೀರು ವುದರಿಂದಲೂ ಇದು ವಿಶಾಲವಾದ ವ್ಯಾಪ್ತಿಯನ್ನು ಹೊಂದಿದೆ.

ಮಾಹಿತಿ ಸಂಗ್ರಹಣೆಯ ಮೂಲಗಳಲ್ಲಿ ಮುಖ್ಯವಾದವು-ವ್ಯಕ್ತಿಗಳ ಹೇಳಿಕೆ, ಚಿಲ್ಲರೆ ವ್ಯಾಪಾರಸ್ಥರು, ವರ್ತಮಾನ ಪತ್ರಿಕೆಗಳ, ಆಕಾಶವಾಣಿ, ಸಂಶೋಧನಾ ಲೇಖನಗಳು, ಗ್ರಂಥಗಳು, ನಿಯತ ಕಲಿಕೆಗಳು ಇತ್ಯಾದಿ, ಮಾಹಿತಿ ಸಂಗ್ರಹಣೆಯು ಕೃಷಿ ಉಪ್ಪನ್ನಗಳ ಉತ್ಪಾದಕರಿಗೆ, ವ್ಯಾಪಾರಸ್ಥರಿಗೆ ಸರಕಾರಕ್ಕೆ, ಗ್ರಾಹಕರಿಗೆ, ಸಂಶೋಧಕರಿಗೆ ವಿವಿಧ ಇಲಾಖೆ ಹಾಗೂ ಸಂಘ–ಸಂಸ್ಥೆಗಳಿಗೆ ಸಂಗ್ರಹಣೆಯ ಹೆಚ್ಚಿನ ಪ್ರಯೋಜನ ಬೇಕಾಗಿರುವುದು ಕೃಷಿ ಉತ್ಪಾದಕರಿಗೆ, ಎನ್ನಬಹುದು, ಏಕೆಂದರೆ ನಮ್ಮ ದೇಶದಲ್ಲಿ ಕೃಷಿ ಉತ್ಪನ್ನಗಳಿಗೆ ಪೂರೈಕೆಗಿಂತಲೂ ಬೇಡಿಕೆ ಹೆಚ್ಚಾಗಿದೆ, ಮತ್ತು ಬೇಡಿಕೆಯ ಪ್ರಮಾಣದಲ್ಲಿ ಬದಲಾವಣೆಯಾದಂತೆ ಪೂರೈಕೆ ಪ್ರಮಾಣದಲ್ಲಿ ಬದಲಾ ವಣೆಯಾಗುವುದಿಲ್ಲ. ಕೃಷಿ ಉತ್ಪನ್ನಗಳ ಬೆಲೆಗಳ ಅಸ್ಥಿರತೆಗೆ ದಾರಿ ಮಾಡಿಕೊಟ್ಟಿ ರುವ ಈ ಪ್ರವೃತ್ತಿಗೆ ಮುಖ್ಯ ಕಾರಣ ನಮ್ಮ ರೈತರಿಗೆ ಯಾವ ದಾಸ್ತಾನು ಎಷ್ಟು ಮತ್ತು ಎಲ್ಲಿ ಉತ್ಪಾದಿಸಬೇಕು ಎಂಬ ಮಾಹಿತಿಗಳ ಕೊರತೆ.

## ಸಂಗ್ರಹಣೆ ಎಂದರೇನು ?

ಕೃಷಿ ಮಾರಾಟಕ್ಕೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಣೆ ಮಾರುಕಟ್ಟೆಯ ಏಳು ಬೀಳುಗಳ ಮೇಲೆ ಪ್ರಭಾವ ಬೀರುವ ಎಲ್ಲಾ ಅಂಶಗಳನ್ನು ಒಳಗೊಳ್ಳುತ್ತದೆ. ಸಾಮಾನ್ಯ ಮಾಹಿತಿ ಸಂಗ್ರಹಣೆಯುವ್ಯಾಪ್ತಿಯಲ್ಲಿ ಬರುವ ಮುಖ್ಯ ಅಂಶಗಳು—

1. ವಿವಿಧ ಸರಕುಗಳ ಸದ್ಯದ ಹಾಗೂ ಭವಿಷ್ಯದ ಪೂರೈಕೆ ಪ್ರಮಾಣ, ನಮೂನೆಗಳು ಮತ್ತು ಪೂರೈಕೆಯ ಕಾಲಾವಧಿ.
2. ಮಾರಾಟ ಮತ್ತು ರವಾನೆಯಲ್ಲಾಗುವ ಬದಲಾವಣೆ, ಸಂಗ್ರಹಣೆಯಲ್ಲಾಗುವ ಬದಲಾವಣೆ ಗ್ರಾಹಕರ ಬೇಡಿಕೆ ಬಳಕೆಯರೀತಿ, ವರ್ತಕರ ಬೇಡಿಕೆ ಹಾಗೂ ಮಾರಾಟದ ಎಲ್ಲ ಹಂತಗಳಲ್ಲಿ ಖರೀದಿ.
3. ಹರಾಜು ಬೆಲೆ ಮತ್ತು ನೀಡಿಕೆ ಬೆಲೆ
4. ಬೆಳೆಗಳ ಅಂದಾಜು - ಮಾರುಕಟ್ಟೆಯ ವಾತಾವರಣ, ಮಾರುಕಟ್ಟೆಯ ಮೇಲೆ ಪರಿಣಾಮ ಬೀರುವ ಪ್ರತಿಕೂಲ ಹವಾಮಾನ ಮತ್ತು ಇತರ ಅಂಶಗಳು.

ಹೀಗೆ ಮಾಹಿತಿ ಸಂಗ್ರಹಣೆ ಕೇವಲ ಉತ್ಪಾದನೆ,ಪೂರೈಕೆ, ಸಂಗ್ರಹ, ಮಾರಾಟ ಮುಂತಾದವುಗಳಿಗೆ ಸಂಬಂಧಿಸಿದ ಅಂಕಿ-ಅಂಶಗಳನ್ನು ಸಂಗ್ರಹಿಸುವ ವಿಷಯವಲ್ಲ. ಅದು ವಿಶಾಲವಾದ ಮತ್ತು ಮಹತ್ವದ ಅರ್ಥವನ್ನೊಳಗೊಂಡಿದೆ. ಕೃಷಿ ಉತ್ಪನ್ನದ ಇಳುವರಿ ಪ್ರಮಾಣ, ಹಿಡುವಳಿದಾರರ ವಿಂಗಡನೆ, ಪ್ರತಿಯೊಂದು ಕೃಷಿಉತ್ಪನ್ನವನ್ನು ಬೆಳೆದ ಕ್ಷೇತ್ರ, ಲಭ್ಯವಿರುವ ನೀರಾವರಿ ಪ್ರಮಾಣ, ಕೃಷಿ ಉಪಕರಣಗಳು, ಮಳೆಯ ಪ್ರಮಾಣ, ಮಾರಾಟವಾದ ಕೃಷಿ ಉತ್ಪನ್ನಗಳ ಬೆಲೆಗಳು, ಆರ್ಥಿಕ ನೆರವು ಒದಗಿಸುವ ಮೂಲಗಳು, ಗ್ರಾಹಕರ ಅಭಿರುಚಿ, ಬೇಡಿಕೆಯ ಪ್ರಮಾಣ, ರಫ್ತು ಬೇಡಿಕೆ, ಆಮದು ಪ್ರಮಾಣ, ಜನ ಸಂಖ್ಯೆ ಮುಂತಾದ ಅನೇಕ ವಿಷಯಗಳು ಮಾಹಿತಿ ಸಂಗ್ರಹಣೆಯ ರಕ್ಷೆಯಲ್ಲಿ ಬರುತ್ತವೆ. ಇದನ್ನು ಮುಖ್ಯವಾಗಿ ಎರಡು ಭಾಗವಾಗಿ ವಿಂಗಡಿಸಬಹುದು.

1. ಪ್ರಸಕ್ತ ಮಾರುಕಟ್ಟೆಗೆ ಸಂಬಂಧಿಸಿದ ಸುದ್ದಿಯ ಸಂಗ್ರಹಣೆ ಮತ್ತು ಪ್ರಸಾರ
2. ಭವಿಷ್ಯತ್ತಿನಲ್ಲಿ ಬೆಲೆಗಳ ಮೇಲೆ ಪರಿಣಾಮ ಬೀರಬಹುದಾದ ಅಂಶಗಳ ಬಗ್ಗೆ ಮಾಹಿತಿ ಮತ್ತು ಮಾರುಕಟ್ಟೆಮೌಲ್ಯಗಳದೀರ್ಘಾವಧಿ ಪ್ರವೃತ್ತಿ, ಮಾರಾಟ, ಬೆಲೆಗಳು, ಕೂಲಿ ಆದಾಯ, ಅಭಿವೃದ್ಧಿ ವೆಚ್ಚ, ಸಾರ್ವಜನಿಕರೊಂದಿಗಿರುವ ಹಣದ ಪೂರೈಕೆ, ವಿವಿಧಮೂಲಗಳಿಂದ ಸಿಗುವ ಸಾಲ, ಬಳಕೆ ಮತ್ತು ಸಂಗ್ರಹಣಾ ಸಾಮರ್ಥ್ಯ, ಜನಸಂಖ್ಯೆ ಬೆಳವಣಿಗೆ ಆಧಾರಿತ ಅಂದಾಜು ಬೇಡಿಕೆ,

ನಗರೀಕರಣದ ಪರಿಮಿತಿ, ಆದಾಯ ಮಟ್ಟದಲ್ಲಿ ಮತ್ತು ಬಳಕೆ ಪದ್ಧತಿಯಲ್ಲಿ ಆಗುವ ಬದಲಾವಣೆ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಸಾಮಾನ್ಯ ಮಾಹಿತಿಯೊಂದಿಗೆ ಮಾರುಕಟ್ಟೆಮಾಹಿತಿಯ ಅಧ್ಯಯನ ಮಾಡಬೇಕಾಗುತ್ತದೆ.

**ರ್ಯಗಳು :**

ಮಾರುಕಟ್ಟೆ ಮಾಹಿತಿಯ ಮುಖ್ಯಕಾರ್ಯ ಮಾರುಕಟ್ಟೆಯ ಅರ್ಥವ್ಯವಸ್ಥೆ ೀಗಿದೆ, ಭವಿಷ್ಯದಲ್ಲಿ ಹೇಗಿರಬಹುದು ಎಂಬ ಬಗ್ಗೆ ಮಾಹಿತಿಯನ್ನು ಪೂರೈಸುವು ು. ಇದೇ ಅದರ ಮುಖ್ಯಗುರಿ. ಕೃಷಿ ಉತ್ಪನ್ನಗಳ ಯೋಗ್ಯಬೆಲೆ ಧೋರಣೆಯನ್ನು ೂಪಿಸುವುದು, ಅದರ ಕಾರ್ಯಾಚರಣೆಯಮೇಲೆ ನಿಗಾ ಇಡುವುದು, ಮಾರುಕಟ್ಟೆ ್ರವೃತ್ತಿಯನ್ನು ಅರಿತುಕೊಳ್ಳುವುದು, ಮಾರುಕಟ್ಟೆ ಬೆಲೆಗಳನ್ನು ಅಪೇಕ್ಷಿತ ಮಟ್ಟ ಲ್ಲಿ ಕಾಯ್ದುಕೊಳ್ಳಲು ಸರಕಾರ ಯಾವ ಕ್ರಮಕೈಗೊಳ್ಳಬೇಕೆಂಬುದನ್ನು ನಿರ್ಧರಿ ುವ ಕಾರ್ಯಗಳನ್ನು ಮಾರುಕಟ್ಟೆ ಮಾಹಿತಿಯು ನಿರ್ವಹಿಸಬೇಕಾಗುತ್ತದೆ.

ಮಾರು ಕಟ್ಟೆ ಮಾಹಿತಿಯು ರೈತರಿಗೆ ಯಾವ ಬೆಳೆಯನ್ನು ಯಾವಾಗ ಬೆಳೆಯ ೇಕು, ಎಲ್ಲಿಬೆಳೆಯ ಬೇಕು, ಎಷ್ಟು ಪ್ರಮಾಣದಲ್ಲಿ ಬೆಳೆಯಬೇಕು ಯಾವ ಸರಕು ಎಲ್ಲಿ ುತ್ತು ಎಷ್ಟು ಪ್ರಮಾಣದಲ್ಲಿ ಮಾರಾಟ ಮಾಡಬೇಕು ಎನ್ನುವ ವಿಷಯಗಳ ಬಗ್ಗೆ ಾಹಿತಿ ಒದಗಿಸಬೇಕು. ಇಷ್ಟೇ ಅಲ್ಲದೆ ರೈತರ ಪ್ರಯೋಜನಕ್ಕೆಂದೇ ಇರುವ ವಿವಿಧ ಾರಾಟ ಸಂಸ್ಥೆಗಳ ಬಗ್ಗೆ ಅವರಿಗೆ ತಿಳಿಸುವುದು ಮತ್ತು ರೈತರ ಹಿತರಕ್ಷಣೆಗಾಗಿ ರಕಾರ ಕೈಗೊಂಡಿರುವ ಕಾರ್ಯ ಚಟುವಟಿಕೆಗಳ ಬಗ್ಗೆ ತಿಳಿಸಬೇಕು. ಬೆಳೆಗಳ ಗಾಗ ನಿಖರಮಾಹಿತಿ ಒದಗಿಸಿ, ಬೆಲೆಗಳಏರಿಳಿತ ಕುರಿತ ಮಾರ್ಗದರ್ಶನ ಮಾಡು ುದು. ಮಾರುಕಟ್ಟೆಯ ಮಾಹಿತಿ ಸಂಗ್ರಹಣೆಯ ಮುಖ್ಯಕೆಲಸ,

**್ರಯೋಜನಗಳು :**

. ಬೆಳೆ ಮತ್ತು ಪಶುಗಳ ಆಯ್ಕೆ ಮತ್ತು ನಿರ್ವಹಣೆ 2. ಸಮಗ್ರ ಕೃಷಿವ್ಯವಹಾರಗಳನ್ನು ಯೋಜಿಸುವುದು. 3. ಮಾರಾಟದ ಕಾಲವನ್ನು ಆಯ್ದುಕೊಳ್ಳುವುದು 4. ಬೆಳೆಗಳ ಉತ್ಪಾದನೆಯಲ್ಲಿ ಹೊಂದಾಣಿಕೆ ಮಾಡುವ ಮೂಲಕ ಉತ್ಪಾದನೆಗೆ ಹೆಚ್ಚಿನಲಾಭ ದೊರಕಿಸುವುದಲ್ಲದೆ ಬೆಲೆ ಸ್ಥಿರೀಕರಣವನ್ನುಂಟು ಮಾಡುವುದು.

. ಸಾಮುದಾಯಿಕ, ಪ್ರಾದೇಶಿಕ ಮತ್ತು ರಾಷ್ಟ್ರೀಯ ಕೃಷಿ ಕಾರ್ಯಕ್ರಮಗಳನ್ನು ಯೋಜಿಸುವುದು.

. ಕೃಷಿ ಉತ್ಪನ್ನಗಳ ವ್ಯವಹಾರದಲ್ಲಿ ತೊಡಗಿರುವ ಸಹಕಾರಿ ಸಂಘಗಳು ಮತ್ತು ಖಾಸಗಿ ವರ್ತಕರಿಗೆ ಮಾರ್ಗದರ್ಶನ ನೀಡುವುದು.

7. ಒಟಿನಲ್ಲಿ ಮಾರುಕಟ್ಟೆ ಮಾಹಿತಿ ಸಂಗ್ರಹಣೆಯು ಮಾರುಕಟ್ಟೆ ವ್ಯವಸ್ಥೆಯ ಎಷ್ಟು ಪರಿಣಾಮಕಾರಿಯಾಗಿದೆ ಎಂಬುದನ್ನು ತಿಳಿದುಕೊಳ್ಳಲು ನೆರವಾಗುವು ದಲ್ಲದೆ ಅದನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಮಾಡಲು ಮಾರ್ಗೋ ಪಾಯಗಳನ್ನು ಕಂಡುಹಿಡಿಯಲು ಸಹಾಯಕವಾಗುತ್ತದೆ.

**ಪೂರೈಕೆ ಪ್ರಮಾಣ :**

ಮಾರುಕಟ್ಟೆ ಸಂಗ್ರಹಣೆ ಹಾಗೂ ಪ್ರಸಾರದ ಹಂತಗಳಲ್ಲಿ ಕಂಡುಬರುವ ನ್ಯೂನತೆಗಳನ್ನು ಇಂದು ಸಾಧ್ಯವಾದ ಮಟ್ಟಿಗೆ ಪರಿಹರಿಸಿಕೊಳ್ಳುವುದು ಅಗತ್ಯ. ಈ ದಿಸೆಯಲ್ಲಿ ಆದಷ್ಟು ಜಾಗ್ರತೆವಹಿಸಿ ನಿಖರವಾದ ಮಾಹಿತಿಗಳನ್ನು ಸಂಗ್ರಹಿಸ ಬೇಕು. ಸಂಗ್ರಹಿಸಿದ ಮಾಹಿತಿಗಳನ್ನು ತಕ್ಷಣ ವಿಶ್ಲೇಷಿಸಿ, ಕ್ರೋಢೀಕರಿಸಿ ಅನಾವಶ್ಯಕವಾಗಿ ಕಾಲವ್ಯಯವಾಗದಂತೆ ಜಾಗ್ರತೆಯಾಗಿ ಪೂರೈಸಬೇಕು. ಎಲ್ಲಾ ಮಾರುಕಟ್ಟೆ ಪ್ರಾಂಗಣಗಳಲ್ಲಿ ದೊಡ್ಡ ಫಲಕಗಳಲ್ಲಿ ಕೃಷಿ ಉತ್ಪನ್ನಗಳ ಬೆಲೆಗಳು ಹಾಗೂ ಸಮೀಪದ ಪೇಟೆಗಳ ಅಂತರವನ್ನು ಬರೆಸಿ ಪ್ರದರ್ಶಿಸಬೇಕು. ವಿವಿಧ ಪೇಟೆಗಳಲ್ಲಿನ ಕೃಷಿಉತ್ಪನ್ನಗಳ ಪ್ರಸರಣದ ಬಗ್ಗೆ ಸರಳವಾಗಿ ವರದಿಗಳನ್ನು ತಯಾ ರಿಸಿ ಗ್ರಾಮೀಣ ಸಂಸ್ಥೆಗಳ ಮುಖಾಂತರ ರೈತರಿಗೆ ಹಂಚಬೇಕು. ಮಾಹಿತಿ ಸಂಗ್ರ ಹಣೆ ಹಾಗೂ ಪ್ರಸಾರಕ್ಕಾಗಿ ಆಧುನಿಕ ಸಂಪರ್ಕ ಸಾಧನಗಳಾದ ದೂರವಾಣಿ, ಟೆಲೆಕ್ಸ್ ಸೌಲಭ್ಯಗಳನ್ನು ಬಳಸಿಕೊಳ್ಳುವುದು ಉತ್ತಮ.

ರೈತರು ತಮ್ಮ ಸರಕಿಗೆ ಪಡೆಯುವ ಬೆಲೆ ಹೆಚ್ಚಿನ ಪ್ರಮಾಣದಲ್ಲಿ ಈ ವರ್ಷ ಇರುವಂತಹ ಒಟ್ಟುಪೂರೈಕೆಯ ಪ್ರಮಾಣವನ್ನು ಅವಲಂಬಿಸಿರುತ್ತದೆ. ಹೀಗೆ ಪೂರೈಕೆ ಉತ್ಪಾದನೆಯ ಮೇಲೆ ನಿಂತಿರುವುದರಿಂದ ಉತ್ತಮ ತಳಿ ಬೀಜಗಳನ್ನು ಬಿತ್ತುವಂತೆ, ಉತ್ಪಾದನಾ ಹಂತದಲ್ಲಿ ತಳಿಯನ್ನು ರೋಗಗಳಿಂದ ದೂರವಿರುವಂತೆ ನೋಡಿಕೊಳ್ಳಬೇಕಾಗುತ್ತದೆ.

ನಮ್ಮ ಹೆಚ್ಚಿನ ರೈತರು ಅಜ್ಞರು ಹಾಗೂ ಅನಕ್ಷರಸ್ಥರು, ಅವರಿಗೆ ಬೆಳೆಯನ್ನು ಹೇಗೆ ಬೆಳೆಯಬೇಕು ಎಂಬ ಬಗ್ಗೆ ಮಾಹಿತಿ ಕೊಟ್ಟರೆ ಸಾಲದು. ಯಾವ ಬೆಳೆಯನ್ನು ಎಷ್ಟು ಪ್ರಮಾಣದಲ್ಲಿ ಬೆಳೆಯಬೇಕು, ಯಾವಾಗ ಬೆಳೆಯಬೇಕು, ಎಲ್ಲಿ ಬೆಳೆಯಬೇಕು ಎಂಬ ಬಗ್ಗೆ ಮಾಹಿತಿ ಕೊಡದೇ ಹೋದಲ್ಲಿ ಯಾವ ಪ್ರಯೋಜನವೂ ಲಭಿಸು ವುದಿಲ್ಲ. ಜೊತೆಗೆ ನಿಯಂತ್ರಿತಮಾರುಕಟ್ಟೆಗಳ ದಾಸ್ತಾನು-ಮಳಿಗೆಗಳ, ಸಾಲ ಸಂಸ್ಥೆ ಗಳ ಮತ್ತು ಇನ್ನಿತರ ಮಾರಾಟ ಸಂಘಗಳ ಪ್ರಯೋಜನಗಳ ಬಗ್ಗೆ ರೈತರಿಗೆ ತಿಳಿಸಬೇಕು.

ಸರಕಾರದ ನೀತಿ ಮತ್ತು ಕಾರ್ಯಗಳ ಬಗ್ಗೆ ಮಾಹಿತಿ ಒದಗಿಸ ಬೇಕು. ...ಸ್ತು ಬೆಲೆ ಹಾಗೂ ಖರೀದಿ ಪಡಿಸುವಿಕೆ, ಕೆಲವು ಸರಕುಗಳ ರಫ್ತಿಗೆ ನೆರವಾಗು ...ತಹ ಕಾರ್ಯಕ್ರಮಗಳ ಬಗ್ಗೆ ರೈತರಿಗೆ ಮಾಹಿತಿ ಒದಗಿಸಿದಲ್ಲಿ ಅವರು ಉತ್ಸ ...ಗಿ ಅವರು ಆದಷ್ಟು ಹೆಚ್ಚು ಬೆಳೆ ಬೆಳೆದು ಲಾಭ ಹೊಂದಲು ಪ್ರಯತ್ನಿಸ ...ದು. ಈ ಎಲ್ಲಾ ಕಾರ್ಯಕ್ರಮಗಳನ್ನೂ ಕೃಷಿ ಇಲಾಖೆ ಅಥವಾ ಮಾರಾಟ ...ಷಗಳ ಬಗ್ಗೆ ಪ್ರಚಾರ ಮಾಡುವ ಯಾವುದೇ ಸಂಸ್ಥೆ ನಿರ್ವಹಿಸಬಹುದು. ಈ ... ಮಾಡುವುದರಿಂದ ರೈತರಿಗೆ ಮಾಹಿತಿ ಸಂಗ್ರಹಣೆಯ ಪೂರ್ಣ ಪ್ರಯೋಜನ ...ರೆತು ಅವರ ಆರ್ಥಿಕ ಸುಧಾರಣೆ ಯಾಗುವುದಲ್ಲದೆ ಕೃಷಿ ಬೆಲೆಗಳಲ್ಲಿ ಸ್ಥಿರತೆ ...ನ್ನು ತರಬಹುದು.

---

ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಯೆ
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ
ಎಲ್ಲರೊಳಗೊಂದಾಗು–ಮಂಕುತಿಮ್ಮ.
ದಿನ ದಿನವು ಕುಸಿದು ಕಟ್ಟಿಸಿಕೊಳುವ ಗುಡಿ ವಿಶ್ವ
ಜನರೆಲ್ಲರಾ ಗುಡಿಯು ಕೆಲಸದಾಳುಗಳು
ಮನೆಯೇನು ನಾಡೇನು ಕುಲವೇನು ಮಠವೇನು
ಎಣಿಸೆಲ್ಲವದೆಯೆಂದು–ಮಂಕುತಿಮ್ಮ.

ಡಿ. ವಿ. ಜಿ.



# ವಿದ್ಯಾರ್ಥಿ ಜೀವನದ ಬೆಳಕು ಸರಣಿ - ೧೧

ಬಿ. ಎಸ್. ಕೃಷ್ಣಮೂರ್ತಿ, ನಂ. 5, ಸೀತಾವಿಲಾಸ ರಸ್ತೆ, ಮೈಸೂರು - 570 024.

ಬಾಳಿನ ಕಲೆ ಅಂದರೇನು ?

ವಿದ್ಯಾರ್ಥಿಗಳು ವಿದ್ಯಾಭ್ಯಾಸದ ಕಾಲದಲ್ಲಿ ನಾವು ಮುಂದೆ ಹೇ ಜೀವನ ಜರುಗಿಸಬೇಕು, ಜನರಲ್ಲಿ ಹೇಗೆ ಸಂಪರ್ಕಿಸಿ ಮಿಳನವಾಗಿ ಜೀವನನಡೆಸ ಸ್ನೇಹಭಾವದಿಂದಲೂ, ಆತ್ಮೀಯತೆಯಿಂದಲೂ ಇರಬೇಕು ಎಂಬುವ ಗುಟ್ಟನ್ನು ತಿ ಯುವುದೂ ಸಹ ಒಂದುಬಗೆಯುಕಲೆಯೂ ಆಗಿದೆ. ಆದ್ದರಿಂದ ಇದೂಸಹ ವಿದ್ಯಾಭ್ಯಾ ಸದ ಭಾಗವೇ ನಿಜ! ಇದರಿಂದ ಬಾಳಿನಲ್ಲಿ 'ಜ್ಞಾನೋದಯ' ವೆಂಬ ರವಿಕಿರಣ ವನ್ನು ಪ್ರಜ್ವಲಿಸುವ ಯತ್ನಮಾಡಬೇಕು.

ವಿದ್ಯೆಯೆಂಬದು ವಿದ್ಯಾರ್ಥಿಗಳಲ್ಲಿ ತುಂಬಿಹರಿಯುವ ಪ್ರವಾಹ! ಈ ಪ್ರವಾ ನಿಶ್ಚಿತ ದಿಕ್ಕಿನಲ್ಲಿ ಸಾಗುತ್ತಾ ಪರಿಪೂರ್ಣಜ್ಞಾನ ನಿಧಿಯೆಂಬ ಸಮುದ್ರ ಸೇರಬೇಕ ಇಂಥ ವಿದ್ಯೆ ನೈತಿಕ, ಮಾನಸಿಕ, ದೈಹಿಕ ಕರ್ಮಗಳಿಂದ ಸಾಧಿಲ್ಪಡುತ್ತದೆ. ಅ ಗಳು ಮಾನವರನ್ನು ಶಕ್ತಿ ಪ್ರವಾತರನ್ನಾಗಿ ಮಾಡುತ್ತವೆ. ಹೀಗಾಗಿ ನೀವು ಶ್ರೇಷ್ಠ ಮಾನವರೂ, ಉತ್ತಮ ಪ್ರಜೆಗಳೂ ಆಗುವ ಶಕ್ತಿ ಹೊಂದುತ್ತೀರಿ, ಇದ ಕಾರ್ಯಗತವಾಗಲು ಸಾಧನೆಅವಶ್ಯಕ. ಸಾಧನೆ ಸಿದ್ಧಿಸಿದರೆ ಆತ್ಮ ಕಲ್ಯಾಣ, ಸಮಾ ಕಲ್ಯಾಣಗಳು ಸಿದ್ದಿಸಿ ತೇಜೋವಂತರಾಗಬಹುದು.

ಗಾಂಧಿಜೀಯವರು ಹೇಳಿರುವಂತೆಶಿಸ್ತು ಪ್ರಾಧಾನ್ಯ. ಆದರಿಂದ ಮನುಷ್ಯನು ಉತ್ತ ಮ ಶಿಕ್ಷಣ ಪಡೆದವನೆಂಬ ಕೀರ್ತಿಬರುವುದು. ಇದರ ಜೊತೆಗೆ ಸತ್ಯ, ಅಹಿಂಸೆ ಸೇವಾಭಾವ, ದೈವಭಕ್ತಿ, ಸ್ವಾವಲಂಬನೆಗಳನ್ನು ಬಿಡದೆ ಪಾಲಿಸಬೇಕು. ಇವುಗಳ ಮಾರ್ಗಾನುಸರಣೆಗಳಿಂದಲೇ ತಮ್ಮ ಬಾಳಿನಿಂದುದ್ದಕ್ಕೂ ನಡೆಸಿಕೊಂಡು ಬಂದರು

ವಿದ್ಯಾರ್ಥಿಗಳು ತಾವುಕಲಿತ ವಿದ್ಯೆಯಿಂದ ತಮ್ಮ ಜ್ಞಾನ ಪರಿಪಕ್ವವಾಗಲು ವಾತಾವರಣವನ್ನು ಕಲ್ಪಿಸಿಕೊಳ್ಳಬೇಕು. ಸ್ವಪ್ರಯತ್ನಗಳಿಂದ ಸಾರ್ಥಕ ಜೀವನದ ನೇತಾರನಾಗಬೇಕಾಗಿದೆ. ಇದಿಲ್ಲವಾದರೆ ಆರ್ಜಿಸಿದ ವಿದ್ಯೆಗೆ ಬೆಲೆಯಿಲ್ಲವಾಗುತ್ತದೆ. ಕಾಲಬದಲಾವಣೆಯಾದಂತೆಲ್ಲಾ ಮನುಷ್ಯರ ಭಾವನೆಗಳು ಸಹಜವಾಗಿ ಬದಲಾವಣೆ ಯಾಗುವುದು ಸ್ವಾಬಾವಿಕ. ಹಳೇರೂಢಿಗಳು ಮಾಯವಾಗಿ ಹೊಸರೂಪ ತಾಳು ವುದು ಪ್ರಕೃತಿ ನಿಯಮವಾಗಿದೆ.

ಗತವರ್ಷಗಳಲ್ಲಿದ್ದಂತೆ ಈಗಿನ ದಿನಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿ ಗಳಲ್ಲಿ, ಗುರುಗಳಲ್ಲಿ ಭಕ್ತಿ, ವಿಧೇಯತೆ ನಶಿಸಿಹೋಗಿದೆ. ಕೆಲವು ವಿದ್ಯಾರ್ಥಿಗಳು ಅಯೋ ಗ್ಯ ಮಿತ್ರರ ಸಂಗದಿಂದ ದುಶ್ಚಟಗನ್ನು ರೂಢಿಸಿಕೊಂಡಿರುವರು. ಇದರಿಂದ ಕೀಳು ಅಭಿರುಚಿ ದುಷ್ಕಾಮನೆಗಳು ಬೆಳೆಯುತ್ತಿವೆ. ಇದರಪರಿಣಾಮದಿಂದ ತಮಗೆ ಮಾನ ಹಾನಿಯಾಗುವುದನ್ನು ಗಣನೆಗೆ ತೆಗೆದುಕೊಂಡಿಲ್ಲ. ಪರಿಶುದ್ಧ ಮಾನವರೆನ್ನಿಸಿಕೊ ಳ್ಳುವ ಆಸೆಯಿರುವ ಸಜ್ಜನರನ್ನು ನೋಡಿಯಾದರೂ ತಮ್ಮ ದುರ್ಗುಣಗಳನ್ನುತಿದ್ದಿ ಕೊಳ್ಳಲು ಯತ್ನಿಸಬೇಕು. ಇದು ಜಾಣತನದ ಮಾರ್ಗವೆನಿಸುತ್ತದೆ.

# ಬಸವಯುಗದ ಶಿವಶರಣೆಯರು.

ಕು. ಆಶಾರಾಣಿ ಬೆನಗುಂಡಿ

ಭಾರತ ದೇಶದಲ್ಲಿ ಪುರಾತನ ಕಾಲದಿಂದಲೂ ಮಹಿಳೆಯರಿಗೆ ಯೋಗ್ಯ ಸ್ಥಾನ ಕಲ್ಪಿಸ ಲಾಗಿದೆ. ಸರಸ್ವತಿವಿದ್ಯೆಯ ಅಧಿದೇವತೆ, ಲಕ್ಷ್ಮಿ ಸಂಪತ್ತಿನಅಧಿದೇವತೆ, ಮಹಾಕಾಳಿ ದುಷ್ಟ ಸಂಹಾರಿಣಿ, ಮಹೇಶ್ವರ, ಚೈತನ್ಯದಾಯಿನಿ ಎಂಬ ಭಾವನೆ ಭಾರತೀಯರ ಜನ ಜೀವನದಲ್ಲಿ ನೆಲೆಯೂರಿದೆ. ಇದಲ್ಲದೇ ಸಾಕ್ಷಾತ್ ಶಿವನೇ ಅರ್ಧನಾರೀಶ್ವರನಾಗಿ ಹೆಣ್ಣು ಗಂಡೆಂಬ ಭಾವನೆಯನ್ನು ತೊಡದುಹಾಕಿದ್ದಾನೆ.

ವೇದ ಉಪನಿಷತ್ತುಗಳ ಕಾಲದಲ್ಲಿ ಆತ್ಮೋನ್ನತಿಯೇ ಮಾನವ ಜೀವನದ ಗುರಿಯಾ ಗಿತ್ತು. ಆತ್ಮಕ್ಕೆ ಹೆಣ್ಣು-ಗಂಡೆಂಬ ಭೇದವಿರಲಿಲ್ಲ ಸ್ತ್ರೀಯರೂ ಆಧ್ಯಾತ್ಮದಜ್ಞಾನ ಸಂಪಾದಿಸಬಹುದು ಎಂಬ ವಿಶಾಲ ಮನೋಭಾವನೆಯಿಂದ ಆ ಕಾಲದ ಋಷಿಗಳು ಹೆಣ್ಣುಮಕ್ಕಳಿಗೆ ವೇದಾಧ್ಯಯನ ಅವಕಾಶ ಕಲ್ಪಿಸಿಕೊಟ್ಟರು. ಆದರಿಂದಾಗಿ ಅನೇಕ ಜನ ಮಹಿಳೆಯರು ಬ್ರಹ್ಮಜ್ಞಾನಿಗಳಾದರು. ಮೈತ್ರೇಯಿ, ಗಾರ್ಗಿ, ವಿಶ್ವವಾರಾ' ಲೋಪಾಮುದ್ರಾ ಮೊದಲಾದ ಮಹಿಳೆಯರು ಆಧ್ಯಾತ್ಮ ಮಾರ್ಗದಲ್ಲಿ ಉನ್ನತಿಯನ್ನು ಪಡೆದಿದ್ದಾರೆ. ಕೆಲವರು ವೇದ ಮಂತ್ರಗಳನ್ನು ರಚಿಸಿದರು. ಇನ್ನು ಕೆಲವರು ಯಜ್ಞ-ಯಾಗಗಳಲ್ಲಿ ಪತಿಗೆ ಸಹಧರ್ಮಿಣಿಯರಾಗಿ ಬಾಳಿದರು. ಸ್ಮೃತಿಕಾರರ ಕಾಲದಲ್ಲಿ ಹೆಣ್ಣು ಧಾರ್ಮಿಕ ಕಾರ್ಯಗಳಲ್ಲಿ ಪುರುಷನ ಸಹಚರಿಯಾಗಲಿಲ್ಲ, ಸಹಾ ಯಕಳಾದಳು. ಪುರುಷರಲ್ಲಿ ಸಂಕುಚಿತ ಭಾವನೆ ಬೆಳೆದಂತೆ ಹೆಣ್ಣಿಗಿದ್ದ ಧಾರ್ಮಿಕ ಸ್ವಾತಂತ್ರ್ಯ ಮಾಯವಾಯಿತು. ಹೆಣ್ಣು ಸ್ವರ್ಗವನ್ನು ಪಡೆಯಬೇಕಾದರೆ ಪತಿಯೇ ಪರದೈವವೆಂದುಭಾವಿಸಿ, ಪತಿಸೇವೆಯ ಮೂಲಕ ಸ್ವರ್ಗ ಪಡೆಯುವ ಆಶ್ವಾಸನೆ ದೊರೆಯಿತು. ಹೆಣ್ಣು ಸ್ವತಂತ್ರಳಾಗಿ ಬಾಳಲು ಅನರ್ಹಳು ಎಂದು ಅವಳ ವ್ಯಕ್ತಿ ತ್ವವನ್ನು ಕಡೆಗಣಿಸಲಾಯಿತು.

ಹೆಣ್ಣಿಗೊದಗಿದ ಈ ಹೀನ ಸ್ಥಿತಿ ಜೈನ ಬೌದ್ಧ ಯುಗದಲ್ಲಿ ಮಾಯವಾಯಿತು ಆಗ ಹೆಣ್ಣು ಮಕ್ಕಳಿಗೆ ಸೇವೆ-ತ್ಯಾಗಗಳ ಶಿಕ್ಷಣವನ್ನೀಯಲಾಗಿ, ಆತ್ಮೋನ್ನತಿಗೆ ಅವಕಾಶ ಕಲ್ಪಿಸಿಕೊಟ್ಟಾಗ ಸಾವಿರಾರು ಬೌದ್ಧ ಭಿಕ್ಷುಕಿಯರು, ಜೈನ ಶ್ರಾವಿಕೆಯರು ಧಾರ್ಮಿಕ ಸೇವೆಗೈದರು.

ಭಾರತದೇಶ ರಾಜಕೀಯ ದೃಷ್ಟಿಯಿಂದ ಏರಿಳಿತಗಳನ್ನು ಕಂಡಂತೆ ಮಹಿಳೆಯರ ಜೀವನವೂ ಅನೇಕ ಸಲ ಏರಿಳಿತಕ್ಕೆ ಒಳಗಾಯಿತು. ಬೌದ್ಧ, ಜೈನಧರ್ಮದ ವೈರಾಗ್ಯ ಭಾವ ಜನಮನಕ್ಕೆ ಹಿಡಿಸದೇ ಆ ಪ್ರಭಾವ ಕುಂದಿದಾಗ' ಹೆಚ್ಚಿನ ಸಂಖ್ಯೆಯ ಮಹಿಳೆ ಯರು ಧಾರ್ಮಿಕ ಜೀವನದಿಂದ ಮತ್ತೆ ದೂರ ಉಳಿದರು.

ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರ ಉದಯದೊಂದಿಗೆ ಹೊಸ ಸಮಾ ಜದ ನಿರ್ಮಾಣದೊಂದಿಗೆ, ಜೀವನದ ವಿವಿಧ ಮುಖಗಳ ಅಭಿವೃದ್ಧಿಗೆ ಆಸ್ಪದ ಕೊಡ ಲಾಯಿತು. ಹೆಣ್ಣು, ಗಂಡು, ಮೇಲು-ಕೀಳು, ಬಡವ-ಬಲ್ಲಿದ ಎಂಬ ಭೇದಗಳನ್ನು

ಮಾರೆತು, ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಶರಣಧರ್ಮ ಪ್ರಚಾರವಾಯಿತು. ಹೆಣ್ಣುಮಕ್ಕಳಿಗೆ ಲಿಂಗಾಧಾರಣೆ, ದೀಕ್ಷಾವಿಧಾನಗಳಿಗೆ ಅವಕಾಶ ಕಲ್ಪಿಸಿ ಕೊಟ್ಟರು. ಬಸವಣ್ಣನವರ ಮಹಾಮನೆ, ಅನುಭವ ಮಂಟಪಗಳಲ್ಲಿ ಹೆಣ್ಣು ಮಕ್ಕಳಿಗೆ ಸ್ಥಾನಗಳು ದೊರೆತವು. ಬಸವಯುಗದಲ್ಲಿ ಹೆಣ್ಣುಮಕ್ಕಳಿಗೆ ಜೀವನದ ಎಲ್ಲ ರಂಗಗಳಲ್ಲಿ ಸಮಾನತೆ ದೊರೆಯಿತು. ಧಾರ್ಮಿಕ ಸ್ವಾತಂತ್ರ್ಯವನ್ನು ಕಳೆದುಕೊಂಡು ಭೋಗ ಜೀವನದ ಕೈಗೊಂಬೆಗಳಾಗಿ ಬಾಳಿದ ಮಹಿಳೆಯರು ಶರಣರ ಪ್ರಭಾವದಿಂದ ಧಾರ್ಮಿಕ ಶಿಕ್ಷಣ ಪಡೆದು ಶಿವಾನುಭವ ಸಂಪನ್ನರಾದರು. ಇದರ ಫಲವಾಗಿ ಬಸವಯುಗದಲ್ಲಿ ಧಾರ್ಮಿಕ ಸ್ವಾತಂತ್ರ್ಯ, ಸಾಮಾಜಿಕ-ಆರ್ಥಿಕ ಸ್ವಾಂತತ್ರ್ಯ, ಶಿಕ್ಷಣ ಸೌಲಭ್ಯ ಪಡೆದುದರ ಫಲವಾಗಿ ಅನುಭವಮಂಟಪದಲ್ಲಿ ಪುರುಷರಷ್ಟೇ ಮಹಿಳೆಯರಿಗೂ ಸಮಾನ ಸ್ಥಾನವು ದೊರಕಿತು. ಕನ್ನಡ-ಸಂಸ್ಕೃತ ಸಾಹಿತ್ಯವನ್ನು ಅಭ್ಯಾಸ. ಮಾಡಿದರು ಅನುಭವಮಂಟಪದ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರ ಶರಣರೊಡನೆ ಆತ್ಮ ಜ್ಞಾನ ಕುರಿತು ಚರ್ಚಿಸುತ್ತಿದ್ದರು. ಅನುಭವ ಮಂಟಪದ ದಾಸೋಹದಲ್ಲಿ ಪಾಲ್ಗೊಂಡ ಶಿವ-ಶರಣೆಯರು ತಮ್ಮ ಅನುಭವವನ್ನು ವಚನರೂಪದಲ್ಲಿ ಹೊರಹೊಮ್ಮಿಸಿ ಶ್ರೇಷ್ಠ ವಚನಕಾರ್ತಿಯರೂ ಎನಿಸಿಕೊಂಡರು.

ಇಂತಹ ಸಮಯದಲ್ಲಿ ಹೆಸರಾಂತ ಶಿವಶರಣೆಯರು ಆಗಿಹೋದರು. ಅಕ್ಕ ನಾಗಲಾಂಬಿಕೆ ಶಿವಶರಣೆಯರಲ್ಲಿ ಹೆಚ್ಚಿನ ಮಹತ್ವ ಪಡೆದವಳು. ಚಿಕ್ಕಂದಿನಿಂದಲೂ ಯೋಗಾಭ್ಯಾಸ ಕನ್ನಡ-ಸಂಸ್ಕೃತ ಸಾಹಿತ್ಯಾಭ್ಯಾಸಗೈದವಳು, ಭಕ್ತಿ ಭಂಡಾರಿ ಬಸವಣ್ಣ ಜ್ಞಾನನಿಧಿ ಚನ್ನಬಸವಣ್ಣನವರ ವ್ಯಕ್ತಿತ್ವವನ್ನು ರೂಪಿಸಿದ ಶ್ರೇಯಸ್ಸು ಈ ತಾಯಿಯದು. ಅಕ್ಕಮಹಾದೇವಿಯ ವಚನ ಮಹಿಮೆಯಿಂದಲೂ ವ್ಯಕ್ತಿ ವೈಶಿಷ್ಟ್ಯದಿಂದಲೂ ಮೇಲಾದ ಶಿವಶರಣೆ. ನಮಗೆ ತಿಳಿದ ಮಟ್ಟಿಗೆ ಕನ್ನಡ ಸಾಹಿತ್ಯದಲ್ಲಿ ಅವಳೇ ಮೊದಲ ಕವಯಿತ್ರಿ. ಆಧ್ಯಾತ್ಮ ಮತ್ತು ಗದ್ಯಕವಿತ್ವ ಇವುಗಳ ಸಮ್ಮಿಳನಕ್ಕೆ ಅಕ್ಕಮಹಾದೇವಿ ಮೊದಲಗಿತ್ತಿ. ಸಾಂಪ್ರದಾಯಿಕ ಸಮಾಜದ ಸಂಕೋಲೆಗಳನ್ನು ಮುರಿದೊಗೆದು, ಲಗ್ನಸಂಸ್ಥೆಯನ್ನು ಅಲ್ಲಗಳೆದು ಚನ್ನಮಲ್ಲಿಕಾರ್ಜುನನೆಂಬ ಲೋಕಪತಿಯನ್ನೇ ಪತಿಯಾಗಿವರಿಸಿ, ಅವಳುಮಾಡಿದ ಉಗ್ರಸಾಧನೆ, ಪಡೆದ ಸಿದ್ಧಿ ಆಶ್ಚರ್ಯಕರವಾದಂತಹವು. ಬಸವಣ್ಣನವರ ಪತ್ನಿಯರಾದ ನೀಲಾಂಬಿಕೆ ಗಂಗಾಂಬಿಕೆಯರು ಪತಿಯಸಾನಿಧ್ಯದಿಂದ ತಮ್ಮ ಬಾಳಿಗೆ ಬೆಳಕನ್ನು ಕಂಡುಕೊಂಡವರು. ಬಸವಣ್ಣನವರ ಮಹಾಮನೆಯಾಗಲೂ ತಮ್ಮ ಜೀವನವನ್ನು ಗಂಧದ ಕೊರಡಿನಂತೆ ಸವೆಯಿಸಿದರು. ನೀಲಾಂಬಿಕೆಗೆ ಬಸವಣ್ಣನವರು ಪತಿ, ಗುರು, ದೇವರು ಸರ್ವಸ್ವವಾಗಿದ್ದರು. ಗಂಗಾಂಬಿಕೆ ತನ್ನ ಪತಿ ಮತ್ತು ಅಕ್ಕ ನಡೆದ ಹಾದಿಯಲ್ಲೇ ಸಾಗಿದ ಶಿವಶರಣೆ. ಮಂತ್ರಿಯ ಮಗಳು ಗಂಗಾಂಬಿಕೆ, ಸಿದ್ಧರಸ ದಣ್ಣಾಯಕರ ಮಗಳು ನೀಲಾಂಬಿಕೆ ಸುಖದ ಸುಪ್ಪತ್ತಿಗೆಯಲ್ಲಿ ರಾಜವೈಭವದಲ್ಲಿ ಬೆಳೆದವರು. ಆದರೂ ಅವರಿಬ್ಬರೂ ಪತಿಯ ಇಚ್ಛೆಯನ್ನು ಸರಿಯಾಗಿ ಅರ್ಥಮಾಡಿ

ಡು, ಹಿರಿಯ ಶರಣೆ ಅಕ್ಕನಾಗಲಾಂಬಿಕೆಯ ಮಾರ್ಗದರ್ಶನದಲ್ಲಿ ಗಂಗಾಂಬಿಕೆ
ಾಂಬಿಕೆಯರು ವೀರಶೈವ ಧರ್ಮ ತತ್ವಗಳನ್ನು ಅರಿತುಕೊಂಡು ಆಚರಣೆಯಲ್ಲಿ
ರು.

ಬಸವಣ್ಣನವರು ಭಂಡಾರಿಯಕಾರ್ಯ ನಿರ್ವಹಿಸುತಿದ್ದ ಕಾಲದಲ್ಲಿ ಬೆಳಿಗ್ಗೆ
ಲಿಂಗಪೂಜೆ ಮಾಡಿಕೊಂಡು ಉಪಹಾರ ಸೇವಿಸಿ ತಮ್ಮ ಕೆಲಸಕ್ಕೆ ಹೋಗು
ರು. ಮಧ್ಯಾಹ್ನ ಪೂಜೆ ಮುಗಿಸಿ, ವಿಶ್ರಾಂತಿ ಪಡೆದು ಮತ್ತೆ ಕೆಲಸಕ್ಕೆ
ಗುತ್ತಿದ್ದರು. ನಂತರ ಸಾಯಂಕಾಲ ಮನೆಗೆ ಬಂದು ಶಿವಾನುಭವಗೋಷ್ಠಿ
ುತ್ತಿದ್ದರು. ಬಸವಣ್ಣನವರ ಪತ್ನಿಯರಾದ ಗಂಗಾಂಬಿಕೆ, ನೀಲಾಂಬಿಕೆಯರು
ಣ್ಣನವರು ರಚಿಸಿದ ವಚನಗೀತೆಗಳನ್ನು ಭಕ್ತಿ ಭರಿತರಾಗಿ, ಏಕಾಗ್ರತೆಯಿಂದ
ುತ್ತಿದ್ದರು. ಅಕ್ಕ ನಾಗಲಾಂಬಿಕೆಯು ಶಿವಯೋಗಸಾಧನೆ, ಗಂಗಾಂಬಿಕೆಯ
ತ್ವ ಶಕ್ತಿ, ನೀಲಾಂಬಿಕೆಯ ದಾಸೋಹಭಾವಗಳು ಒಂದುಗೂಡಿ ಜನಕಲ್ಯಾಣ
ಬಸವಣ್ಣನವರ ಮನೆ ಮಹಾಮನೆಯಾಗಿ ಪರಿವರ್ತನೆ ಮಾಡಿದ ಕೀರ್ತಿ
ಶಿವಶರಣೆಯರಿಗೆ ಸಲ್ಲುತ್ತದೆ. ಬಸವಣ್ಣನವರ ದಾಸೋಹದ ಮಹಾಮನೆಯ
ಣೆಗಾರಿಕೆ ಹೊತ್ತು ಗಂಧದ ಕೊರಡಿನಂತೆ ನೀಲಾಂಬಿಕೆ ತನ್ನ ಸೇವೆಗೈದರೆ,
ಾಂಬಿಕೆ ಅನುಭವ ಮಂಟಪದ ಕಾರ್ಯಗಳಿಗೆ ಬಸವಣ್ಣ, ಚನ್ನಬಸವಣ್ಣನ
ಾಯಕಳಾಗಿ, ಸಲಹೆಗಾರ್ತಿಯಾಗಿ ಸೇವೆ ಸಲ್ಲಿಸಿದಳು. ಗಂಗಾಂಬಿಕೆ ಸ್ವತಂತ್ರ
ತ್ವವನ್ನು ಪಡೆದ ಧೀರೆ. ಪತಿ ಪ್ರಾರಂಭಿಸಿದ ಕಾರ್ಯವನ್ನು ಮುನ್ನಡೆಸಿ
ಂಡು ಹೋಗುವುದೇ ಸತಿಧರ್ಮವೆಂದು ಬಗೆದು ಧರ್ಮರಕ್ಷಣೆಗಾಗಿ ಪ್ರಾಣಾ
ಕೆಗೈದ ವೀರಾಂಗನೆ.

ಬಸವಣ್ಣನವರ ಮಹಾಮನೆಯ ಹಿರಿಯಮಗಳಾಗಿ ಬೆಳೆದ ಗುಡ್ಡಾಪುರದ
ನಾನಿಯಮ್ಮ ವೀರಶೈವ ಧರ್ಮಪ್ರಚಾರಕ್ಕಾಗಿ, ಧರ್ಮರಕ್ಷಣೆಗಾಗಿ, ಕಲ್ಯಾಣ
ರ ಬಳ್ಳಾರಿ, ಶ್ರೀಶೈಲ, ರಾಮೇಶ್ವರಗಳಲ್ಲಿ ಸಂಚರಿಸಿ ಸಾವಿರಾರು ಜನರಿಗೆ
ಗದೀಕ್ಷೆಯನ್ನಿತ್ತಳು. ತನ್ನ ಆತ್ಮಶಕ್ತಿಯ ಬಲದಿಂದ ಬೇಡಿದವರಿಗೆ ಬೇಡಿದುದ
ಯುವ ವರದಾನಿಯಾಗಿದ್ದಳು.

ಪದ ಅಪ್ಪಣ್ಣನ ಪತ್ನಿ ಲಿಂಗಮ್ಮ ತನುಮನಗಳ ಗೆದ್ದ ಧೀರೆ. ಉರಿಲಿಂಗ
ಯ ಪತ್ನಿ ಕಾಳವ್ವೆ ವ್ರತ ನಿಯಮಗಳನ್ನು ನಿಷ್ಠೆಯಿಂದ ನಡೆಸುವ ನಿಷ್ಠಾ
ತ ಶರಣೆ

ಪತಿಯೇ ಪರದೈವವೆಂದು ಬಾಳಿದ ಅಕ್ಕಮಹಾದೇವಿ, ಬೊಂತಾಲದೇವಿಯರು
ರೇ ಪತಿಯೆಂಬ ಛಲದಿಂದ ಬಾಳಿದ ಶಿವಶರಣೆಯರು. ಶರಣ–ಲಿಂಗಪತಿ
ದು ಬಾಳಿದಧೀರ ಶಿವಶರಣೆಯರು. ಅಯ್ದಕ್ಕಿ ಮಾರಯ್ಯನ ಪತ್ನಿ ಲಕ್ಕಮ್ಮ
ಗೆ ಕಾಯಕದ ಮಹತ್ವವನ್ನು ಅರುಹಿದಳು. ದೇಹಕ್ಕೆ ಅಗತ್ಯವಾದುದನ್ನು ಸತ್ಯ
ದ ಕಾಯಕದಲ್ಲಿ ದುಡಿದು ಹಂಚಿ ಉಣ್ಣುವ ಆಧ್ಯಾತ್ಮ ಸಾಧನೆ ಎಂದು ತಿಳಿ
ಪಡಿಸಿದ ಶರಣೆ.

ಮೋಳಿಗೆಯ ಮಾರಯ್ಯನ ಪತ್ನಿಯಾದ ಮಹಾದೇವಮ್ಮ ಪತಿಯನ್ನು ಹಿಂಬಾಲಿಸಿ, ಆತನ ಸಾಧನೆಗೆ ಸಹಾಯಕಳಾಗಿ ತಾನೂ ಆಧ್ಯಾತ್ಮ ಮಾರ್ಗದಲ್ಲಿ ನಡೆದ ಮಹಾಶರಣೆ, ಸತಿಯಾಗಿ ತನ್ನ ವಿನಯವನ್ನೂ ಸಾಧಕಿಯಾಗಿ ತನ್ನ ಆಧ್ಯಾತ್ಮಿಕ ನಿಲುವನ್ನೂ ಸೂಚಿಸಿ ಮಾರಯ್ಯನ ಸಾಧನೆಗೆ ಅವಲಂಬನೆಯನ್ನು ಕೊಟ್ಟ ಶರಣೆ.

ತಮ್ಮ ತಮ್ಮ ವಿಶಿಷ್ಟವಾದ ಕಾಯಕಗಳಿಂದಲೇ ಹಲವಾರು ಮಹಿಳೆಯರು ಶ್ರೇಷ್ಠ ಶಿವಶರಣೆಯರು ಎಂಬ ಹೆಗ್ಗಳಿಕೆಗೆ ಪಾತ್ರರಾದರು. 'ಕಾಯಕವೇ ಕೈಲಾಸ' 'ಆಚಾರವೇ ಸ್ವರ್ಗ' ಎಂದು ಬಸವ ಉಪದೇಶಿಸಿದುದರ ಫಲವಾಗಿ ಕದಿರೆಯ ರೇಮವ್ವೆ ನೂಲು ತೆಗೆಯುವ ಕಾಯಕ ಕೈಗೊಂಡಳು. ಕೊಟ್ಟಣದ ಸೋಮವ್ವೆ ಶರಣರ ಮನೆಗಳಲ್ಲಿ ಭತ್ತ ಕುಟ್ಟುತ್ತಿದ್ದಳು. ತೊಂಗಿನ ಮಹಾದೇವಿ ಶರಣರನ್ನು ಪೂಜೆಗೆ ಎಬ್ಬಿಸುವುದು, ಸೇವೆಗೆ ಗೂರುವ ಶಿವಾನುಭವ ಮಂಟಪದ ಶಿಸ್ತನ್ನು ಕಾಣುವುದು, ಬಾಣಸಿಗ ಮಲ್ಲರಸಿ ಮಹಾಮನೆಯಲ್ಲಿ ಪ್ರಸಾದ ಸಿದ್ಧಗೊಳಿಸು ವುದು, ಶಿವಮಾಯಿದೇವಿ ಪುರಾಣ ಹೇಳುವುದು, ಬಾಚಲೆ ದೇವಾಲಯಗಳಲ್ಲಿ ಮದ್ದಳೆ ಬಾರಿಸುವುದು, ಗೊಗ್ಗವ್ವೆ ದೇವರಿಗೆ ಧೂಪ ಹಾಕುವುದು, ನಾಟ್ಯ ಪ್ರವೀಣೆ ಸಿದ್ದಮ್ಮ ದೇವಾಲಯದಲ್ಲಿ ವಾದ್ಯ ಬಾರಿಸುವುದು. ಇದೂ ಅಲ್ಲದೆ ಗುಪ್ತಕಾಯಕ ದಿಂದ ಬಾಳಿದ ಶಿವಶರಣೆಯರೂ ಕಲ್ಯಾಣದಲ್ಲಿದ್ದರು.

ಹನ್ನೆರಡನೆಯ ಶತಮಾನದಲ್ಲಿ ಶಿವಶರಣೆಯರು ತಮಗೆ ದೊರೆತ ಅವಕಾಶ ವನ್ನು ಸದುಪಯೋಗಪಡಿಸಿಕೊಂಡರು. ಭಕ್ತಿ, ಜ್ಞಾನ, ವೈರಾಗ್ಯದ ಸಾಕಾರ ಮೂರ್ತಿಗಳಾದ ಶಿವಶರಣರು ಆತ್ಮೋನ್ನತಿಯ ಮಾರ್ಗದಲ್ಲಿ ಹಿಂಜರಿದಾಗ, ಆತ್ಮ ಶಕ್ತಿಯ ಪಾಬಲ್ಯದಿಂದ ಅವರ ಕೈ ಹಿಡಿದು ಮುನ್ನಡೆಸಿದ ಆಯ್ದಕ್ಕಿ ಲಕ್ಕಮ್ಮ, ಮೋಳಿ ಮಹಾದೇವಿಯರು ಆದರ್ಶ ಸತಿಯರು. ಪರಶಿವನೇ ಪತಿಯೆಂದು ಬಾಳಿದ ಅಕ್ಕಮಹಾದೇವಿ, ಬೊಂತಲಾದೇವಿಯರ ಬಾಳು ಉಜ್ವಲವಾಗಿದೆ. ಅಂಗೈ ಲಿಂಗದಲ್ಲಿ ಪತಿಯನ್ನೂ ಪರಮೇಶ್ವರನನ್ನೂ ಕಂಡು ಐಕ್ಯಸ್ಥಾನದಲ್ಲಿ ಮೆರೆದ ನೀಲಾಂಬಿಕೆ ಪೂಜಾರ್ಹಳು.

ವೇದಯುಗದಲ್ಲಿ ಮಹಿಳೆಯರು ಕೇವಲ ಆತ್ಮಜ್ಞಾನ ಪಡೆದರು. ಜೈನ ಬೌದ್ಧ ಯುಗದಲ್ಲಿ ಸೇವಾತ್ಯಾಗಗಳ ಬಲದಿಂದ ಮಹಿಳೆಯರು ಸಾಮಾಜಿಕ ಧಾರ್ಮಿಕ ಸೇವೆಗೈದರು. ರಜಪೂತಯುಗದಲ್ಲಿ ಮಹಿಳೆಯರು ವೀರರಮಣಿಯರಾಗಿ ಮೆರೆದರು ಬಸವಯುಗದಲ್ಲಿ ಮಹಿಳೆಯರು ಸರ್ವತೋಮುಖ ಪ್ರಗತಿಯನ್ನು ಸಾಧಿಸಿ, ಸ್ವತಂತ್ರ ವ್ಯಕ್ತಿತ್ವವನ್ನು ಪಡೆದುಕೊಂಡು ಆತ್ಮೋನ್ನತಿಯನ್ನು ಸಾಧಿಸಿದರು. ಸಾಮಾಜಿಕ ಜೀವನದಲ್ಲಿ ಸಮಾನತೆಯನ್ನೂ, ಆರ್ಥಿಕ ಜೀವನದಲ್ಲಿ ಪ್ರಗತಿಯನ್ನೂ ಆಧ್ಯಾತ್ಮ ಜೀವ ನದಲ್ಲಿ ಉನ್ನತಿಯನ್ನೂ ಸಾಧಿಸಿದರು. ತಮ್ಮ ಅನುಭಾವದ ಅಮೃತದಂತಿರುವ ವಚನ ಸಾಹಿತ್ಯವನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಸತ್ವಯುತಗೈದ ಮಹತ್ವ ನಮ್ಮ ಶಿವಶರಣೆಯರದಾಗಿದೆ.

ಕೃಪೆ -ಬಸವಪಥ

"ಸಿದ್ಧಗಂಗಾ" ಚಿರಾಯುವಾಗಲೆಂದು ಹರಸಿ ಹಾರೈಸಿರುವ

ಆಜೀವ ಸದಸ್ಯರ ಬಳಗ

327 ಶ್ರೀ ಎಂ. ರುದ್ರಾರಾಧ್ಯ S/o ಶ್ರೀ ಮಲ್ಲಯ್ಯ, ಹಳೆಮಡಿವಾಳ, ಬೆಂ-53

328 ಶ್ರೀ ಎಸ್. ಗಿರಿರಾಜು, S/o ಶ್ರೀ ಸಿದ್ಧನಂಜಯ್ಯ, ಎಲ್.ಐ.ಸಿ. ಕಾಲೋನಿ, ಜಯನಗರ, ಬೆಂಗಳೂರು - 11

329 ಶ್ರೀ ಹೆಚ್. ಜಿ. ಲೋಕೇಶ್, S/o ಶ್ರೀ ಎಸ್.ಎಸ್. ಗುರುಮಲ್ಲಯ್ಯ, ಜಯನಗರ, ಬೆಂಗಳೂರು- 11

1330 ಶ್ರೀ ಹೆಚ್. ವಿ. ರೇಣುಕ ಪ್ರಸಾದ್ S/o ಶ್ರೀ ಹೆಚ್. ವಿ. ವಿರೂಪಾಕ್ಷಯ್ಯ, ರಾಜಾಜಿ ನಗರ, ಬೆಂಗಳೂರು – 10

1331 ಶ್ರೀ ಬಿ. ಜೆ. ಪ್ರಸನ್ನಕುಮಾರ್, S/o ಶ್ರೀ ಎಸ್. ಜಯಣ್ಣ. ಆರ್. ಆರ್. ರಾಯ ಕಲ್ಯಾಣ ಮಂದಿರ, ಶಂಕರಪುರಂ, ಬೆಂಗಳೂರು - 4

1332 ಶ್ರೀ ಹೆಚ್, ಎಸ್. ರಾಜಣ್ಣ, ಹಾರಗದ್ದೆ, ಆನೇಕಲ್ ತಾಲ್ಲೂಕ್, ಬೆಂಗಳೂರು ಜಿಲ್ಲೆ.

1333 ಶ್ರೀ ಎಸ್. ಟಿ. ಮಹೇಶ್ S/o ಶ್ರೀ ಎಸ್. ತಮ್ಮಯ್ಯ, ರಾಜಾಜಿ–ನಗರ, ಬೆಂಗಳೂರು – 10

1334 ಶ್ರೀ ಎನ್ ಬಿ ಪಾಂಡುರಂಗಶೆಟ್ಟಿ ಕಿರಾಣಿ ಮರ್ಚೆಂಟ್, ಕೂಡ್ಲಿಗಿ, ಬಳ್ಳಾರಿ

1335 ಶ್ರೀ ಹೆಚ್. ಮೃತ್ಯುಂಜಯ, ಪತ್ರಿಕೋದ್ಯಮಿ, ಪೈಯಾಲಿ ಕಾವಲ್, ಬೆಂಗಳೂರು – 3

1336 ಶ್ರೀ ಬಿ. ಎಸ್. ಬಸವರಾಜಪ್ಪ, ಪ್ರೊ|| ಮಂಜುಮಳಿಗೆ, ಕೆ. ಆರ್. ಮೊಹಲ್ಲ, ಮೈಸೂರು – 4

133‑ ಶ್ರೀ ಬಿ. ಸಿ. ಬಸವರಾಜ್, ಎಕ್ಸಿಕ್ಯುಟೀವ್ ಇಂಜಿನಿಯರ್, ಕುವೆಂಪು ನಗರ, ಮೈಸೂರು – 23

1338 ಶ್ರೀ ಈಶ್ವರಪ್ಪ, ಎಕ್ಸ್‌ಸೈಸ್ ಡಿ. ಸಿ, ಕುವೆಂಪು ನಗರ, ಮೈಸೂರು – 23

1339 ಪ್ರಾಂಶುಪಾಲರು, ಎಸ್. ಎಸ್. ಮಾರ್ ಗೋಲ್ ಕಾಲೇಜ್, ಶಹದಾಬಾದ್, ಗುಲ್ಬರ್ಗ – ಜಿಲ್ಲೆ.

1340 ಶ್ರೀ ಎಸ್. ಶಿವಾನಂದಯ್ಯ S/o ಶ್ರೀ ಎಸ್. ನಂಜುಂಡಯ್ಯ —— ಎಲ್. ಐ. ಸಿ. ಕಾಲೋನಿ, ಜಯನಗರ, ಬೆಂಗಳೂರು 11

1341 ಶ್ರೀ ಮುಕೇಶ್, S/o ಶ್ರೀ ಬಿ. ಎಮ್. ಚನ್ನಪ್ಪ, ಚಾಮರಾಜ ಪೇಟೆ ಬೆಂಗಳೂರು - 18

1342 ಶ್ರೀ ಕೆ. ಎಂ. ಜಗದೀಶ್, ಸೇಲ್ ಸಹಾಯಕರು S/o ಶ್ರೀ ಟಿ. ವಿ. ಮಲ್ಲಪ್ಪ, ಐ ಎ. ಎಸ್. ಎಂ. ಸಿ, ನಾಗಪಾಲ್, ಮಂಡಿಪೇಟೆ, ತುಮಕೂರು.